# ಕಲ್ಯಾಣ ಕಿರಣ

ಮಾ ಸ ಪ ತ್ರಿ ಕೆ

ಡಿ ಪ್ರತಿ :
ಂದು ರೂಪಾಯಿ

ವಾರ್ಷಿಕ ಚಂದಾ
ಹನ್ನೆರಡು ರೂಪಾಯಿ


## ಈ ಸಂಚಿಕೆಯಲ್ಲಿ ಏನೀದೆ ?



ುಖ ಪುಟ : ವಿಶ್ವಗುರು ಬಸವಣ್ಣ

ಹಿಂಬದಿಯ ಹೊದಿಕೆ : ಚಿಕ್ಕಮಗಳೂರಿನಲ್ಲಿ 'ತರಂಗಿಣಿ' ಬಿಡುಗಡೆ


# ಕಲ್ಯಾಣ ಕಿರಣ

ಸಂಪುಟ : ೪ **ಬಸವ ಜಯಂತಿ ಸಂಚಿಕೆ** ಸಂಚಿಕೆ : ೧

ಬಸವ ಶಕೆ ೮೭೨


**ಬಸವ ಚರಣಕ್ಕೆ** **ನುಡಿ ನೈವೇದ್ಯ**

## ಬಸವ ಹೃದಯ ಕರುಣೆಯ ಅರಮನೆ

ನೋಡಿಲ್ಲಿ ಬಸವಹೃದಯ ಶಿವನ ಕರುಣೆಯರಮನೆ
ಪಡೆಯಲುಂಟು ನೀನಿಲ್ಲಿ ಸಕಲ ಸಿರಿಯ ಶರಣನೇ ॥ ಪ ॥

ಮರ್ತ್ಯದಲ್ಲಿ ಮಹಮನೆಯ ಕಟ್ಟಲಿಕ್ಕೆ ಬಂದು ತಾನು
ಸತ್ಯಪಥವ ತೋರಿ ನಮ್ಮ ಬಾಳಬನ್ನ ತೊಡೆದನು ।
ಮಂತ್ರಪುರುಷನಾಗಿ ಮೆರೆದು ನಮ್ಮ ಭ್ರಾಂತಿ ಕಳೆದನು
ಕಂತುಹರನ ಕಂದನಾಗಿ ಮನವನು ಸಂತೈಸಿದ ॥ ೧ ॥

ಹೆತ್ತಮ್ಮ ನೀಲಮ್ಮ ಜಗದಕ್ಕ ಮಹಾದೇವಿ,
ಸುತ್ತಲುಂಟು ಶರಣಬಳಗ ಎತ್ತಿಳುಹಲು ಕಮ್ಮನೆ ।
ಚಂದ್ರಶೈತ್ಯದಲ್ಲಿ ಬೆಳೆಯೆ ಬೆಳುದಿಂಗಳ ಹಂಗೇಕೆ
ಸಾಂದ್ರ ಶರಣರೊಲಿಮೆ ದೊರೆಯೆ ಶಿವನೊಲಿಮೆಯ ಹಂಗೇಕೆ ? ॥ ೨ ॥

ಕಾಣದ ಕೈಲಾಸಕಿನ್ನು ಮನಸು ಹರಿಯದಂತೆ ಗೈದ
ಕಾಣ್ಬಲೋಕದಲ್ಲಿ ಸೇವೆಮಾಡ್ವ ಸೂತ್ರ ಕಲಿಸಿದ ।
ಭವದ ನದಿಯ ದಾಂಟಲೆಂದು ಹರಿಗೋಲ ನೀಡಿದ
ಶಿವ ಅಂಬಿಗ ತಾನಾಗಿ ನಮ್ಮನಿಂದು ದಾಂಟಿಸಿದ ॥ ೩ ॥

ಮರ್ತ್ಯಲೋಕ ಕರ್ತೃಶಿವನ ನಿಜ ಮನೆಯೆಂದರುಹಿದ
ಸ್ತುತ್ಯಮಾರ್ಗದಲ್ಲಿ ನಡೆವ ನೀತಿಶಾಸ್ತ್ರ ರಚಿಸಿದ ।
'ಹರನ ಕರುಣೆ ಸರುವರಿಗೆ' ಮುಗಿಲನೇರಿ ಕೂಗಿದ,
ಭರದಿಂದ ಮುಕ್ತಿ ಪಥದ ಕದವ ತಾನು ತೆರೆದನು ॥ ೪ ॥

ನಮಗಾಗಿ ತಾನು ದುಡಿದ, ಲೋಕಕಾಗಿ ಮಡಿದನು
ಚಂದನದ ಕೊರಡಿನಂತೆ ಸವೆದು ಸಣ್ಣಗಾದನು ।
ಮನುಕುಲದ ಸ್ವಾತಂತ್ರ್ಯ ಸಾರ್ದ ಮಹಾಪುರುಷನು
ಸಚ್ಚಿದಾನಂದ ಕಂದ ವಿಶ್ವಜ್ಯೋತಿ ಬಸವನು ॥ ೫ ॥

—ಮಾತಾಜಿ.

# ನಿಮ್ಮ ಅನಿಸಿಕೆ



**ಪೂಜ್ಯಮಾತೆಯವರ ಚರಣಗಳಲ್ಲಿ, ಅನಂತ ಪೊಡವುಡಿಕೆಗಳು**

ಕಲ್ಯಾಣ ಕಿರಣ ಪತ್ರಿಕೆಯು ಮುದ್ದಾದ ಹಸುಗೂಸಿನಂತೆ ತಿಂಗಳು ತಿಂಗಳೂ ಹೊಸ ಕಾಂತಿಯನ್ನು ಲಾವಣ್ಯವನ್ನು ಮೈಗೂಡಿಸಿಕೊಂಡು ಬೆಳೆಯುತ್ತಿದೆ. ಯೋಗಿವರೇಣ್ಯನಂತೆ ಮುಮುಕ್ಷುಗಳನ್ನು ಆಕರ್ಷಿಸುತ್ತಲಿದೆ. ಈ ಪತ್ರಿಕೆಯಿಂದ ಕನ್ನಡ ಭಾಷಾ ಪತ್ರಿಕಾ ರಂಗದಲ್ಲಿದ್ದ ಪ್ರೌಢ ಧಾರ್ಮಿಕ ಪತ್ರಿಕೆಯ ಕೊರತೆ ತುಂಬಿದೆ. ಕಡಿದಷ್ಟೂ ಸಿಹಿಯಾಗಿರುವ ಕಲ್ಲುಸಕ್ಕರೆಯಂತಿದೆ ಈ ಪತ್ರಿಕೆ.

ಆಗಾಗ ಪ್ರಭುದೇವರ ಬೆಡಗಿನ ವಚನಗಳಿಗಿಷ್ಟು ವ್ಯಾಖ್ಯೆ ಬರಲಿ. ಕನ್ನಡಮ್ಮನ ಕಿರೀಟರತ್ನದಂತೆ ಕಲ್ಯಾಣ ಕಿರಣ ಪ್ರಕಾಶಿಸಲಿ.

ದೇಶನೂರು. ಕೆ. ಎಸ್. ಈರವ್ವ.

ತಾಯಿ,

ತಾವು ತುಂಗೆಯಂತೆ ನಮ್ಮ ನಗರಕ್ಕೆ ಹರಿದುಬಂದು ಆಧ್ಯಾತ್ಮದ ಸಿಹಿನೀರನ್ನು ನೀಡಿ, ಸಾಗಿದಿರಿ. ಅಜ್ಞಾನ ನಿದ್ರೆಯಲ್ಲಿದ್ದವರನ್ನು ಜ್ಞಾನದ ಗಂಟೆ ಹೊಡೆದು ಎಬ್ಬಿಸಿದಿರಿ. ನಿಮ್ಮ ಪ್ರತಿನಿಧಿ ಕಲ್ಯಾಣಕಿರಣ ಜ್ಞಾನಭಿಕ್ಷೆ ನೀಡುತ್ತ ಓಡಿ ಬರುತ್ತದೆ. ಸಂಜೆಯಾಗುತ್ತಲೇ ಹಾಲೂಡಿಸುವ ಹಸುವಿಗಾಗಿ ಎಳೆಗರುವು ಅಂಬಾ ಎಂದೊರಲುತ್ತ ಕಾಯುವಂತೆ, ತಿಂಗಳಿಗೊಮ್ಮೆ ನಾವು ಕಲ್ಯಾಣ ಕಿರಣ ಧೇನುವಿಗಾಗಿ ಕಾಯುವ ಎಳೆಗರುಗಳಾಗಿರುತ್ತೇವೆ. ಪೋಸ್ಟ್‌ಮನ್ನನಿಗೆ ಎಂದು ಇಲ್ಲದ ಬೆಲೆ ಆ ದಿನಗಳಲ್ಲಿ. ರಾಮನ ಬರವಿಗಾಗಿ ಕಾಯ್ವ ಶಬರಿಯಂತೆ ನಾವು ಕಾಯುವಾಗ ಕಲ್ಯಾಣ ಕಿರಣ ನಿಮ್ಮ ದೂತನಾಗಿ ಬರುತ್ತಿದ್ದಂತೆಯೇ ಅದರಲ್ಲಿ ನಿಮ್ಮನ್ನು ದರ್ಶಿಸಿದ ಅನುಭವ. ನೀವು ಗೈದಿರುವ, ಗೈಯುತ್ತಿರುವ "ಮಹಾದಾನ"ದ ಋಣವನ್ನುಂಡ ನಾನು ಮತ್ತು ನನ್ನಂತಹವರು ತೀರಿಸುವುದು ಹೇಗೆ ಎಂದು ಒಮ್ಮೊಮ್ಮೆ ಹೃದಯ ತುಂಬುತ್ತದೆ.

ಶಿವಮೊಗ್ಗ, **ಪ್ರಕಾಶಚಂದ್ರ.**





# ಮಾತೃಹರಕೆ

## ವಿಕೃತ ಭಾರತ

ಸಂಸ್ಥೆಗಾಗಿ ಕೆಲವು ಶಿಕ್ಷಕರು, ಕಾರಕೂನರು ಇತ್ಯಾದಿ ಬೇಕಾಗಿತ್ತು. ನಮ್ಮ ಪತ್ರಿಕೆಯಲ್ಲೇ ಪ್ರಕಟಣೆ ಕೊಡಲಾಗಿತ್ತು, ದೊಡ್ಡ ದಿನ ಪತ್ರಿಕೆಗಳಿಗೆ ಕೊಡುವುದೆಂದು ಕೆಲವರ ಅಭಿಪ್ರಾಯ. ವಿಪರೀತ ಅರ್ಜಿಗಳು ಬಂದರೆ ಪರಿಶೀಲಿಸುವುದು ಕಷ್ಟಕರ ಎಂದು ಬದಿಗೊತ್ತಿದೆ ಆ ಸಲಹೆಯನ್ನು. ಎರಡನೆಯದಾಗಿ ಅರ್ಜಿಗಳ ಜೊತೆಗೆ ದೊಡ್ಡ ದೊಡ್ಡವರ, ಪರಿಚಿತರ ಶಿಫಾರಸು ಪತ್ರಗಳನ್ನೂ ತಂದರೆ ಬಹಳ ತಾಪತ್ರಯ. ಅವರುಗಳ ಮುಖ ಕೆಡಿಸಿಕೊಳ್ಳುವ ಪರಿಸ್ಥಿತಿ. ಆದ್ದರಿಂದ ನಮ್ಮ ಪತ್ರಿಕೆಯಲ್ಲೇ ಪ್ರಕಟಣೆ ಸಾಕು ಎಂದುಕೊಂಡೆ. "ಅರ್ಜಿಗಾಗಿ ಒಂದಿಷ್ಟು ಶುಲ್ಕವಿರಿಸಿ ದಿನಪತ್ರಿಕೆಗೆ ಕೊಟ್ಟರೆ ಹೇಗಿದ್ದರೂ ನೂರಾರು, ಸಾವಿರಾರು ಅರ್ಜಿಗಳು ಬರುವವು. ಅದರಿಂದಲೇ ಜಾಹಿರಾತಿನ ಖರ್ಚೂ ಅಲ್ಲದೆ, ಮೇಲಾದಾಯ ಪಡೆಯಬಹುದು" ಇನ್ನೋರ್ವರ ಸಲಹೆ. ಹೃದಯ ನಲುಗಿತು; ಉಸಿರು ಕಟ್ಟಿ ಒದ್ದಾಡಿತು. ಈಗಾಗಲೇ ನಿರುದ್ಯೋಗದ ಆವಿಗೆಯ ಕಿಚ್ಚಿನಲ್ಲಿ ಬೇದಿರುವ ಅನೇಕರಿಗೆ ಭರವಸೆಯ ಧಾರೆಯ ತುಣುಕು ಮೋಡವನ್ನು ಮೊದಲು ತೋರಿ, ನಂತರ ನಿರಾಶೆಯ ಬೆಂಕಿಯನ್ನು ಸುರಿಯುವುದೆ? ನಮಗೆ ಅಭ್ಯರ್ಥಿಗಳು ಬೇಕಾಗಿರುವುದು ನಾಲ್ಕಾರು ಹುದ್ದೆಗಳಿಗೆ; ಅದಕ್ಕಾಗಿ ಸಹಸ್ರಾರು ಬಡವರಿಂದ ಹಣ ಉಚ್ಚುವ ಯೋಜನೆಯೇ. ನಿರುದ್ಯೋಗ–ಬಡತನಗಳ ಶೋಷಣೆಯೆಂದರೆ ಬತ್ತಲೆ ಇದ್ದವನಿಗೆ ಬೆಂಕಿಯ ಕಾವು ಕೊಟ್ಟಂತೆ!

ಪ್ರಕಟಣೆ ಕೊಟ್ಟಾಯಿತು ನಮ್ಮ ಪತ್ರಿಕೆಯಲ್ಲೇ. ಆದರೆ ಅರ್ಜಿಗಳು ನೂರಾರು ಬಂದು ಬಿಟ್ಟವು. ಎಲ್ಲೆಲ್ಲಿಂದಲೋ! ಇವರುಗಳಿಗೆಲ್ಲ ಹೇಗೆ ಗೊತ್ತಾಯಿತು? ನನಗೆ ಆಶ್ಚರ್ಯದ ಹೊನಲು. ಸಿಹಿಯನ್ನಿಟ್ಟುದನ್ನು ಇರುವೆಗಳು ಹೇಗೆ ಪತ್ತೆ ಹಚ್ಚುವವು,

ಜಾಹಿರಾತಿನಿಂದಲೇ? ಯಾರಾದರೂ ಅನ್ನ ದಾಸೋಹ ಇಟ್ಟರೆ ಹೇಗೆ ಗೊತ್ತಾಗುವುದೋ, ನೊಂದ ಬೆಂದ ಬಸವಳಿದ, ಬತ್ತಿದ ಮುಖದಲ್ಲಿ ಪಿಳಿ ಪಿಳಿ ಬಿಡುವ ಕಣ್ಣುಗಳನ್ನು ಹೊತ್ತು ಎಷ್ಟು ಅಬಾಲವೃದ್ಧರು ಅನ್ನದಾಸೋಹದ ಮನೆ ಬಾಗಿಲ ಮುಂದೆ ನಿಲ್ಲರೆ? ಹೊಟ್ಟೆಯ 'ಕಿಚ್ಚು' ಎಂಬ ಹಸಿವೆ ಆ ರೀತಿ ಅವರನ್ನು ಪ್ರಚೋದಿಸುವದಷ್ಟೆ. ಅಷ್ಟಲ್ಲದೆ ದೇವರ ದಾಸಿಮಯ್ಯನವರು ಹೇಳುತ್ತಾರೆಯೇ?

ಹಸಿವೆಂಬ ಹೆಬ್ಬಾವು ಬಸಿರ ಬಂದು ಹಿಡಿದಡೆ
ವಿಷವೇರಿತ್ತಯ್ಯಾ ಆ ಪಾದ ಮಸ್ತಕಕ್ಕೆ
ಹಸಿವಿಗನ್ನವನಿಕ್ಕಿ ವಿಷವ ನಿಳುಹ ಬಲ್ಲಡೆ
ವಸುಧೆಗೆ ಆತನೇ ಜಗದೀಶ ಕಾಣಾ ರಾಮನಾಥ !

ಅರ್ಜಿಗಳನ್ನು ಹೊತ್ತು ಅನೇಕ ಅಭ್ಯರ್ಥಿಗಳು ಬಂದರು. ತಮ್ಮ ಸಂಕಷ್ಟಗಳ ಸರಪಳಿಯನ್ನೇ ಮುಂದಿಟ್ಟರು. ಅನೇಕರ ಕರುಣಾಜನಕ ಬದುಕಿನ ಕಥೆಗಳನ್ನು ಹೃದಯಸ್ಪರ್ಶಿಯಾಗಿ ವಿವರಿಸಿದರು. ಕೆಲವರ ಕೃಶವಾದ ಕಾಯ, ನಿಸ್ಸತ್ವಪೂರ್ಣ ಕಣ್ಣುಗಳನ್ನು ನೋಡಿದಾಗಲಂತೂ ಹೊಟ್ಟೆಯಲ್ಲಿ ಹಾವು ಹರಿದಾಡಿದ ಅನುಭವ, ಹೃದಯವನ್ನು ಯಾರೋ ಹಿಂಡಿದಂತಹ ವೇದನೆ, ಒಡನೆಯೇ ನಮ್ಮ ನಾಡಿನ ಕರಾಳ ಬಡತನದ ದರ್ಶನ. ಯಾವ ಭರವಸೆಯುಂಟು ಇಂತಹ ಅಸಂಖ್ಯಾತ ಜೀವಿಗಳಿಗೆ ಎಂಬ ಕಳವಳ.

ಒಬ್ಬೊಬ್ಬರ ಕಥೆಯನ್ನು ಕೇಳಿದಾಗಲೂ ವಿಪರೀತ ವ್ಯಥೆ "ಇಂಥಾ ಬೃಹತ್ತಾದ ಸಂಕಷ್ಟವನ್ನು ಪರಿಹರಿಸುವಲ್ಲಿ ನಾವು ಏನು ತಾನೇ, ಎಷ್ಟರ ಮಟ್ಟಿಗೆ ಮಾಡಬಲ್ಲೆವು ಎಂಬ ಚಿಂತನೆ. ನಮ್ಮ ಸಮಾಜದ ವ್ಯವಸ್ಥೆ ವಿಕೃತಾವಸ್ಥೆಗೆ ಬರುತ್ತಿದೆ. ಭವಿಷ್ಯದಲ್ಲಿ ಯಾವ ಆಶೆಯಿಲ್ಲದೆ ಬಾಳನ್ನು ನಿರಾಸಕ್ತವಾಗಿ ತಳ್ಳುವವರ ಸಂಖ್ಯೆ ಜಾಸ್ತಿಯಾಗುತ್ತಿದೆ. ಪ್ರತಿಭೆ ಬುದ್ಧಿವಂತಿಕೆಗಳ ಕುತ್ತಿಗೆ ಹಿಸುಕಲಾಗುತ್ತಿದೆ, ತಪ್ಪು ಯಾರದು? ಸರಿಪಡಿಸುವ ಬಗೆ ಹೇಗೆ? ಬಗೆಯಲಾರದ ಸಮಸ್ಯೆಗಳು.

ಇದು ಜಾತಿ ಪ್ರಧಾನ ಮತ್ತು ಹಣ ಪ್ರಧಾನ ವ್ಯವಸ್ಥೆಯ ಸಮಾಜವೇ ವಿನಾ ಗುಣ ಪ್ರಧಾನ, ಬುದ್ಧಿ ಪ್ರಧಾನ ವ್ಯವಸ್ಥೆಯ ಸಮಾಜವಲ್ಲ. ತನ್ನ ತಂದೆ-ತಾಯಿಗಳನ್ನು ಹೇಗೆ ಒಬ್ಬನು ಆರಿಸಿಕೊಳ್ಳಲಾರನೋ ಹಾಗೆ ಜಾತಿಯನ್ನೂ ಆರಿಸಿಕೊಳ್ಳಲಾರ (ಜಾತಿ ಪ್ರಧಾನ ವ್ಯವಸ್ಥೆಯ ಭಾರತದಲ್ಲಿ) ಹೀಗಿದ್ದಾಗ ಶತಶತಮಾನಗಳಿಂದ ಕೀಳು ಕುಲದಲ್ಲಿ ವಿಭಾಗೀಕರಣ ಹೊಂದಿ, ಪ್ರತಿಭೆ-ಶಕ್ತಿಗಳು ಹತ್ತಿಕ್ಕಲ್ಪಟ್ಟು ಕೆಲವರು ಬಿಸಿಯುಸಿರನ್ನು ಬಿಡುತ್ತಲೇ ಬಂದಿದ್ದರೆ ಈಗ ಚಕ್ರವು ತಿರುಗು ಮುರುಗಾಗಿ ಚಲಿಸುತ್ತಿದೆ. ಹಿಂದುಳಿದವ--ಮುಂದರಿದವ ಎಂಬ ವಿಭಜನೆಯನ್ನು ವಿಚಿತ್ರವಾದಗಳ



ಆಧಾರದಿಂದ ಮಾಡಿ, ಕೆಲವೊಮ್ಮೆ ವೈಯಕ್ತಿಕ ದ್ವೇಷವನ್ನೂ ಸಾರ್ವತ್ರಿಕವಾಗಿ ಕಾರಿ ಹಲವು ವರ್ಗಗಳನ್ನು ಹತ್ತಿಕ್ಕುವ ಪ್ರಯತ್ನ ಆರಂಭವಾಗಿದೆ. ಹಿಂದಿನಿಂದ ಸಾಗಿ ಬಂದ ತುಳಿತ ಅಜ್ಞಾನ ಮತ್ತು ಮೂಢನಂಬಿಕೆಯ ಕೂಸಾಗಿದ್ದರೆ, ಇತ್ತೀಚೆಗೆ ಆರಂಭವಾಗುತ್ತಿರುವ ಶೋಷಣೆ ಕುತಂತ್ರ ಮತ್ತು ದ್ವೇಷದ ಪ್ರತಿಫಲವಾಗಿದೆ. ಇವೆರಡೂ ಅಪರಾಧಗಳೇ, ಏಕೆಂದರೆ ಒಂದು ತಪ್ಪನ್ನು ಇನ್ನೊಂದು ತಪ್ಪಿನಿಂದ ಸರಿಪಡಿಸುವ ಸಾಹಸ.

ಯಾವ ಮಾನವನನ್ನೇ ಆಗಲಿ ಜಾತಿಯ ಆಧಾರದ ಮೇಲೆ ಯಾವುದಕ್ಕೆ ಸೇರಿಸುವದು ತಪ್ಪು. ಪ್ರತಿಭೆ, ಪಾಂಡಿತ್ಯ, ಬುದ್ಧಿವಂತಿಕೆಗಳು ಜಾತಿಯ ಆಧಾರದ ಮೇಲೆ ಅರಳುವವಲ್ಲ, ಅಂತರ್ಗತವಾಗಿ ಹುದುಗಿಕೊಂಡಿದ್ದು ವಿಕಾಸಗೊಳ್ಳುವಂತಹವು. ಕೀಳು ಜಾತಿಯೆಂದು ಕರೆದು ಅವನ ದೈವೀದತ್ತ ಪ್ರತಿಭೆಯನ್ನು ಹತ್ತಿಕ್ಕುವದು ಎಷ್ಟು ಅಮಾನುಷವೋ, ಮೇಲು ಜಾತಿಯವನೆಂದು ದ್ವೇಷದಿಂದ ಹತ್ತಿಕ್ಕುವುದೂ ಅಮಾನುಷ. ''ಅಂತೂ ಇಂತೂ ಕುಂತಿ ಮಕ್ಕಳಿಗೆ ರಾಜ್ಯವಿಲ್ಲ" ಎಂಬ ಗಾದೆಯಂತೆ ವಿಪರೀತ, ಮತ್ತು ವಿಕೃತ ಬೆಳವಣಿಗೆ ಭಾರತೀಯ ಸಮಾಜಕ್ಕೆ ತಪ್ಪಿದ್ದಲ್ಲ.

ಜಾತಿಯಿಂದ ಶ್ರೇಷ್ಠ-ಕನಿಷ್ಠತೆಗಳನ್ನು ನಿರ್ಣಯಿಸುವುದು, ಯೋಗ್ಯಾ-ಯೋಗ್ಯತೆ ನಿರ್ಧರಿಸುವುದು ಅವಿವೇಕ ರಮಣೀಯ. ಉದಾ : ಎರಡು ಕುದುರೆಗಳಿವೆ. ಒಂದು ಶೋಷಣೆಗೊಳಗಾಗಿ, ಬಡಕಲಾಗಿದೆ. ಇನ್ನೊಂದು ಒಡನಾಡಿಯ ಪಾಲನ್ನು ಕಸಿದು ತಿಂದು ದಷ್ಟಪುಷ್ಟವಾಗಿದೆ. ಇಂಥ ಇಜ್ಜೋಡಿಯ ಮಧ್ಯೆ ಓಟದ ಸ್ಪರ್ಧೆ ನಿಜಕ್ಕೂ ಅಪರಾಧ. ಇದಕ್ಕೆ ಪರಿಹಾರ ಹುಡುಕುತ್ತೇನೆಂದು ಓಟದ ಸ್ಪರ್ಧೆಯನ್ನೇ ಇಡದೆ "ಇದು ಬಡಕಲಾಗಿದೆ, ಶೋಷಿಸಲ್ಪಟ್ಟಿದೆ. ಆದ್ದರಿಂದ ಇದನ್ನೇ ಗೆದ್ದುದೆಂದು ನಿರ್ಣಯಿಸೋಣ" ಎಂದು ತೀರ್ಪಿತ್ತರೆ ಕುರುಡರ ರಾಜ್ಯವಾಗುತ್ತದೆ. ಹಾಗೆಯೇ ಬುದ್ಧಿವಂತರು, ಮೇಲು ಜಾತಿಯವರು ಬಹಳಷ್ಟು ಕಾಲ ಕೀಳುಜಾತಿಯವರ ಶೋಷಣೆ ಮಾಡಿದ್ದಾರೆಂದು ಭಾವಿಸೋಣ, ಅಂದ ಮಾತ್ರಕ್ಕೆ ಶೋಷಿತರೆ ಯೋಗ್ಯರೆಂದು ಉನ್ನತ ಹುದ್ದೆಗೇರಿಸುವುದು ಭಯಂಕರ ವ್ಯವಸ್ಥೆ. ಏಕೆಂದರೆ ಯೋಜನೆ ಮಾಡಬಲ್ಲ, ರಾಷ್ಟ್ರದ ಮಂದಿರವನ್ನು ಕಟ್ಟಬಲ್ಲ ಬುದ್ಧಿವಂತ ತಲೆಗಳು, ಅವು ಯಾವ ಜಾತಿಯಲ್ಲೇ ಇರಲಿ, ಇಂದು ಅವಶ್ಯಕ. ಶಕ್ತಿಗಿಂತಲೂ ಯುಕ್ತಿ ಮುಖ್ಯ. ಶಕ್ತಿಯಿಂದ ಸಾಧಿಸಲಾಗದ ಅನೇಕ ಕಾರ್ಯಗಳನ್ನು ಯುಕ್ತಿಯಿಂದ ಸಾಧಿಸಲು ಸಾಧ್ಯ ಎಂಬ ಬಗ್ಗೆ ನೂರೆಂಟು ಅನುಭವ ವಾಣಿಗಳೂ, ಪಂಚತಂತ್ರ ಕಥೆಗಳೂ ಇವೆ. ಹೀಗಿರುವಾಗ ಮತಿವಂತರನ್ನೇ ಬೆಳೆಯಗೊಡದಿದ್ದರೆ ದೇಶದ ಪ್ರತಿಭೆ ಕೊಲೆ ಮಾಡಲ್ಪಟ್ಟು, ವಿಕ್ರಾಂತಾವಸ್ಥೆಗೆ ಬರುವ ಸಂಭವವಿದೆ.

ಹಾಗಾದರೆ ಪರಿಹಾರವೇನು? ದುರ್ಬಲ ಕುದುರೆಗೆ ಪರಿಪುಷ್ಟ ಆಹಾರ-ಮೇವು

ಕೊಡಬೇಕು. ಅದನ್ನು ಬಲಯುಕ್ತ ಮಾಡಿ ಬಲಿಷ್ಠ ಕುದುರೆಯೊಡನೆ ಓಡಲು ಬಿಡಬೇಕು. ಹಾಗೆಯೇ ನಿಮ್ನ ವರ್ಗದವರು, ಹಿಂದುಳಿದವರು, ಶೋಷಿತರಿಗೆ ಕೊಡಬಹುದಾದ ಅತಿ ಹೆಚ್ಚಿನ ಸೌಲಭ್ಯಗಳನ್ನು ಕೊಡಬೇಕು. ಆದರೆ ಬುದ್ಧಿವಂತಿಕೆಯ ಸ್ಪರ್ಧೆಯಲ್ಲಿ ಜಾತಿಯನ್ನು ಆಧಾರವಾಗಿರಿಸಿಕೊಳ್ಳದೆ, ಪ್ರತಿಭೆ–ಪಾಂಡಿತ್ಯಗಳನ್ನು ಮಾಪಕಗಳನ್ನಾಗಿರಿಸಬೇಕು. ಬೌದ್ಧಿಕವಾಗಿ ಮತಿವಂತರಲ್ಲಿ ಆರೋಗ್ಯಯುಕ್ತ ಸ್ಪರ್ಧೆಯನ್ನೇರ್ಪಡಿಸುವ ವಾತಾವರಣ, ಜಾತಿ–ಮತ, ವರ್ಣ–ವರ್ಗ ಭೇದವಿಲ್ಲದೆ ಪ್ರತಿಭಾವಂತರಿಗೆ ಪುರಸ್ಕಾರ ನೀಡುವ ಗುಣಗ್ರಾಹಕತೆಯ ಪರಿಸರ ಏರ್ಪಡಬೇಕು.

ನಿರುದ್ಯೋಗ ಮತ್ತು ಬಡತನ ಕೆಲವೊಮ್ಮೆ ಸ್ವಯಂ ಕಲ್ಪಿತವೂ ಆಗಿವೆ. ಶಾಲೆ ಕಾಲೇಜಿನ ಶಿಕ್ಷಣ ಪಡೆದ ಮಾತ್ರಕ್ಕೆ ಕೈ ಕೆಸರಾಗುವ, ಮೈ ಬೆವರುವ ಕಾಯಕವನ್ನೇ ಮಾಡಬಾರದು. ಪ್ಯಾಂಟು ಧರಿಸಿ, ಕುರ್ಚಿಯ ಮೇಲೆ ಕುಳಿತು ಮಾಡುವ ಕಾಯಕಗಳೇ ಆಗಬೇಕು ಅವೇ ಗೌರವಯುತ ಕಾಯಕಗಳು ಎಂಬ ಒಂದು ವಿಚಿತ್ರ ನಂಬುಗೆ ವಿದ್ಯಾವಂತರಲ್ಲಿ ಅಳವಟ್ಟಿದೆ. ಅಚ್ಚುಕೂಟದಲ್ಲಿ ಮೊಳೆಜೋಡಿಸುವ ಕಾಯಕವಾಗಲಿ, ಬಡಗಿಯ ವೃತ್ತಿಯಾಗಲಿ, ಹೊಲಿಗೆ ಕಾಯಕವಾಗಲಿ ಮುಂತಾದುವು ಸ್ವತಂತ್ರ ಮತ್ತು ಸುಖಜೀವನಕ್ಕೆ ಸಹಾಯಕವಾಗುವುದಿದ್ದರೂ ವಿದ್ಯಾವಂತರಿಗೆ ಅವು ಸಲ್ಲವೆಂಬ ತಿಳುವಳಿಕೆ ಕೆಲವರಿಗೆ ಮನರಂಜನೆಯ ಸೌಲಭ್ಯಗಳು ಕಡಿಮೆಯಾದ ಕಾರಣ ಗ್ರಾಮಾಂತರ ಪ್ರದೇಶಗಳಿಗೆ ಹೋಗದಿರುವ ಮನೋಭಾವವೂ ಒಂದು ಕಾರಣ. ಹೀಗೆ ಇಂದಿನ ಭಾರತೀಯ ಸಮಾಜ ವಿಚಿತ್ರವಾದ ತಿಳುವಳಿಕೆ, ವಿಚಿತ್ರವಾದ ಆಚರಣೆಗಳಿಂದ ವಿಕೃತವಾಗಿ, ಅಡ್ಡಾದಿಡ್ಡಿಯಾಗಿ ಬೆಳೆಯುತ್ತಿದೆ. ಸ್ವಾರ್ಥ, ಅಧಿಕಾರಲಾಲಸೆಯ ಕೆಲವು ರಾಜಕಾರಣಗಳಿಂದ ಗುಂಪುಗಾರಿಕೆ ಬೆಳೆಯುತ್ತಿದೆ. ಮತ ಮತಗಳ ತಿಕ್ಕಾಟ, ಜಾತಿಗಳ ಘರ್ಷಣೆ, ಹಲ್ಲುಮಸೆತ ಅಧಿಕವಾಗುತ್ತಿದೆ. ಈ ಪಾಶವಿಕ ಯಾದವೀ ಕಲಹದಲ್ಲಿ ಅನೇಕ ನಿರಪರಾಧಿಗಳು ನಜ್ಜುಗುಜ್ಜಾಗುತ್ತಿದ್ದಾರೆ.

ಇಲ್ಲಿ ಗಮನಿಸಬಹುದಾದ ಮತ್ತೊಂದು ವಿಶೇಷ ಅಂಶವೆಂದರೆ ಶಿಫಾರಸು ಮತ್ತು ಹಣ. ಒಂದೊಂದು ಉದ್ಯೋಗಕ್ಕೂ ಸಹಸ್ರಾರು ರೂಪಾಯಿಗಳ ವೆಚ್ಚವನ್ನು ಮಾಡಬಲ್ಲ ಹಣವಂತನಿಗೇ ಮತ್ತೂ ದುಡಿಮೆಯ ದಾರಿ; ಉನ್ನತ ಉದ್ಯೋಗಗಳು. ದೊಡ್ಡವರ ವಲಯದಲ್ಲಿ ಓಡಾಡುವವರ ಶಿಫಾರಸು ತಂದರೆ ದಾರಿ ಇನ್ನೂ ಸರಳ. ಅಂತೂ ಎಲ್ಲ ವಿಚಿತ್ರ. ಅವಶ್ಯಕತೆ ಇಲ್ಲದವನಿಗೇ ಅಧಿಕಧಿಕ ಹಣ, ಉದ್ಯೋಗ ಎಲ್ಲಾ. ಅವಶ್ಯಕತೆಗಳು ತೃಪ್ತಿಯಾಗದ, ಮಾರುದ್ದ ಬಟ್ಟೆಯುಟ್ಟವನನ್ನು ಇನ್ನೂ ಬರಿದು ಮಾಡುವ, ಬತ್ತಲೆ ಮಾಡುವ ಪರಿಸ್ಥಿತಿ. ಹಣವಿದ್ದುದಾದರೆ ಕತ್ತೆಯೂ ದಿಲ್ಲಿಯನ್ನು ನೋಡಿಬರಬಹುದಾದ ಕುರುಡುರಾಜ್ಯದ ನಿರ್ಮಾಣದ ಪಥದಲ್ಲಿಂದು ನಾವು ಸಾಗುತ್ತಿದ್ದೇವೆ.






**—ಸದ್ಗುರು ಶ್ರೀ ಲಿಂಗಾನಂದ ಸ್ವಾಮಿಗಳು.**

ಶರಣು ಶರಣಾರ್ಥಿ ಎಲೆ ತಾಯೆ.
ಧರೆಯಾಕಾಶ ಮನೆಗಟ್ಟದಂದು, ಹರಿವನಿಲ ಅಗ್ನಿಜಲ
ಮೊಳೆದೋರದಂದು ಹುಟ್ಟಿದಳೆಮ್ಮವ್ವೆ,
ಅದಕ್ಕೆ ಮುನ್ನವೆ ಹುಟ್ಟದೆ ಬೆಳೆದನೆಮ್ಮಯ್ಯ,
ಈ ಇಬ್ಬರ ಬಸುರಲ್ಲಿ ಬಂದೆ ನಾನು.
ಎಮ್ಮ ತಂಗಿಯರೈವರು ಮೊರೆಗೆಟ್ಟು ಹೆಂಡಿರಾದರೆನಗೆ,
ಕಾಮಬಾಣ ತಾಗದೆ ಅವರ ಸಂಗವ ಮಾಡಿದೆನು.
ನಾ ನಿಮ್ಮ ಭಾವನಲ್ಲಯ್ಯನು ; ನೀ ನನಗೆ ನಗೆವೆಣ್ಣು,
ನಮ್ಮ ಗುಹೇಶ್ವರನ ಕೈವಿಡಿದು ಪರಮಸುಖಿಯಾಗಿ
ಕಳವಳದ ಕಂದೆರವಿಯೇನು ಹೇಳಾ ?

**—ಅಲ್ಲಮಪ್ರಭು.**

ತಲೆಯಲಟ್ಟುಂಬ ಜ್ಞಾನದ ಬೆಳಕನ್ನು ಹೊತ್ತು, ಆ ದೀಪ್ತಿಯನ್ನು ಮನಮನಕ್ಕೆ ಹಚ್ಚುತ್ತಾ, ನಡೆಯುತ್ತಲಿದ್ದ ವೈರಾಗ್ಯ ಚಕ್ರವರ್ತಿ ಅಲ್ಲಮಪ್ರಭುವು ಸಂಧಿಸಿದ ಮಹೋನ್ನತ ಶರಣೆ ಮುಕ್ತಾಯಕ್ಕ. ಒಡಹುಟ್ಟಿದ ಸಹೋದರನು, ಮಾರ್ಗದರ್ಶಕ ಗುರುವು, ಮಹಾಯೋಗಿಯು ಆದ ಅಜಗಣ್ಣನು ಇಹದ ಬಾಳ್ವೆಗೆ ಮಂಗಲಹಾಡಿ ದೇವನಡಿಯಲ್ಲಿ ಬೆರೆತಿದ್ದಾನೆ. ಆಗ ಪ್ರಭುವು ದುಃಖಿತಳಾದ ಮುಕ್ತಾಯಿಯನ್ನು ಸಂತೈಸಿ, ಜ್ಞಾನಯುಕ್ತ ಮನಸ್ಸಿಗೆ ಕವಿದಿದ್ದ ಅಜ್ಞಾನದ ಮೋಡವನ್ನು ಚದುರಿಸುತ್ತಾನೆ. "ತಾವಾರು ಮಹಾನುಭಾವ?" ಎಂದು ಮುಕ್ತಾಯಿ ಕೇಳಿದ ಪ್ರಶ್ನೆಗೆ ಪ್ರಭು ಉತ್ತರಿಸುವುದು ಅತ್ಯಂತ ವೈಚಾರಿಕವಾಗಿದೆ.

"ನಾನಾರು, ಎಲ್ಲಿಂದ ಬಂದೆ, ಎಲ್ಲಿಗೆ ಹೋಗಬೇಕು ?" ಇವೇ ಶಿವಯಾತ್ರಿಕನ ಮೂಲ ಪ್ರಶ್ನೆಗಳು. ಈ ಮೂರಕ್ಕೆ ಉತ್ತರ ಕಂಡುಕೊಳ್ಳದೆ ಆತ್ಮಜ್ಞಾನವು ಪೂರ್ಣವಾಗದು. ಮೊಟ್ಟಮೊದಲು ಶಿಷ್ಟಾಚಾರದಂತೆ ಶರಣುಶರಣಾರ್ಥಿ ಎಂದು ನಮನಗೈದು ಹೇಳತೊಡಗುವನು: "ಪೃಥ್ವಿ–ಆಕಾಶ ರೂಪುಗೊಳ್ಳದಂದು, ನೀರು, ಅಗ್ನಿ, ಗಾಳಿಗಳು ಸೃಷ್ಟಿಯಾಗುವ ಪೂರ್ವದಲ್ಲಿ ಅಂದರೆ ಪ್ರಕೃತಿಯು ರೂಪುಗೊಳ್ಳದ ಮುನ್ನವೇ ಪ್ರಭುವಿನ ತಾಯಿ ಚಿಚ್ಛಕ್ತಿ ಹುಟ್ಟಿದ್ದಳು. ಈ ಚಿಚ್ಛಕ್ತಿಯ ಸ್ಫುರಣಕ್ಕೆ ಮುನ್ನವೇ ಪ್ರಭುವಿನ ತಂದೆ ಹುಟ್ಟದೆಯೇ ಬೆಳೆದಿದ್ದ. ಈ ಪರಶಿವ–ಪರಾಶಕ್ತಿಯರ ಸಂಯೋಗದಿಂದಾದ ಜೀವಾತ್ಮನೇ ಪ್ರಭುವು.

ಐವರು ತಂಗಿಯರೆಂದರೆ ಐದು ಇಂದ್ರಿಯಗಳು; ದೇಹದೊಡನೆ ಹುಟ್ಟಿದ ಈ ಐದೂ ತಮ್ಮ ಆಟವೇನೂ ನಡೆಯದ ಕಾರಣ ವಿರಕ್ತನಾದ ಪ್ರಭುವಿಗೆ ದಾಸರಾಗಿದ್ದಾರೆ. ಅವನು ಹೇಳಿದಂತೆ ಕೇಳುವ ಹೆಂಡಿರಾಗಿದ್ದಾರೆ. ಶರೀರ ಇಂದ್ರಿಯಗಳನ್ನು ಬಿಟ್ಟು ಮಾನವ ದೇಹಧಾರಿಯಾದವನಾವನೂ ಇರಲಾರ. ಅವುಗಳೊಡನೆ ವ್ಯವಹಾರ, ಅವುಗಳ ಮೂಲಕ ವ್ಯವಹಾರ ಇದ್ದೇ ಇರುತ್ತದೆ. ಆದರೆ ಜ್ಞಾನಿಗಳು ಅವುಗಳ ಮೂಲಕ ಮಾಡುವ ವ್ಯವಹಾರ ತುಂಬಾ ವಿಲಕ್ಷಣವಾಗಿರುತ್ತದೆ. ಕಾಮಬಾಣವು ತಾಗದೇ ಅವರು ಇಂದ್ರಿಯ ವ್ಯವಹಾರ ಮಾಡುತ್ತಾರೆ.

ಮೂಗು ಪರಿಮಳದ ಆಸ್ವಾದನೆ ಬಿಟ್ಟರೂ, ಉಸಿರಾಟ ಬಿಡಲಾರದು. ನಾಲಿಗೆ ಚಪಲದ ತಿನಿಸು ತಿನ್ನದಿದ್ದರೂ, ಜೀವನಾವಶ್ಯಕತೆಗೆ ಆಹಾರವನ್ನು ಭುಂಜಿಸಲೇ ಬೇಕಷ್ಟೇ. ಕಣ್ಣು ಭೋಗವಸ್ತುಗಳನ್ನು ನೋಡದಿದ್ದರೂ ಸೃಷ್ಟಿಯಲ್ಲಿ ವ್ಯವಹರಿಸಲು, ಲಿಂಗನೋಟ–ತ್ರಾಟಕಕ್ಕಾದರೂ ಬೇಕಷ್ಟೇ. ಚರ್ಮವು ದೈಹಿಕ ಸುಖಾನುಭವಕ್ಕೆ ಇಚ್ಛಿಸದಿದ್ದರೂ, ಶೀತೋಷ್ಣಗಳ ಅನುಭವಕ್ಕಾದರೂ ಬೇಕಷ್ಟೆ. ಕಿವಿಯು ಕ್ಷುಲ್ಲಕ ವಿಷಯಗಳ ಗ್ರಹಣಕ್ಕೆ ಬೇಡವಾದರೂ, ಶಬ್ದ ಗ್ರಹಣಕ್ಕೆ ಬೇಕೇ ಬೇಕು.

ಕಾಮಬಾಣ ತಾಗದೇ ಇಂದ್ರಿಯಗಳೊಡನೆ ವ್ಯವಹಾರವಿರಿಸಿಕೊಳ್ಳುವ ವಿರಕ್ತರು, ಮೃತೇಂದ್ರಿಯರಲ್ಲ. ಜಿತೇಂದ್ರಿಯರು. ಇಂದ್ರಿಯ ನಿಷ್ಕ್ರಿಯತ್ವಕ್ಕೆ ಈಡಾದವರಲ್ಲ. ಇಂದ್ರಿಯ ಪಟುತ್ವ ಬೆಳೆಸಿಕೊಂಡವರು. ಅಂಗೇಂದ್ರಿಯಗಳನ್ನು ಲಿಂಗಮಯವಾಗಿ ಮಾಡಿಕೊಂಡು "ಹರಿವ ನದಿಗೆ ಮೈಯೆಲ್ಲ ಕಾಲು, ಉರಿವ ಅಗ್ನಿಗೆ ಮೈಯೆಲ್ಲ ನಾಲಿಗೆ, ಗುಹೇಶ್ವರನ ಶರಣ ಸರ್ವಾಂಗಲಿಂಗಿ" ಎಂಬಂತೆ ಸರ್ವೇಂದ್ರಿಯ ದೈವೀಮಯನಾದ ಶಿವಯೋಗಿ, ಮುಕ್ತಾಯಕ್ಕ ಪಾರಮಾರ್ಥ ಪಥದ ಸಾಧಕಳು. ಮುಕ್ತಿ ಎಂಬ ಸೋದರಿಯ ಒಡಹುಟ್ಟಿದವಳು. ಅಲ್ಲಮಪ್ರಭುವಾದರೋ ಮುಕ್ತಿಯ ಅಂಗನೆಯ ಪತಿ. ಹೀಗಾಗಿ ಮುಕ್ತಾಯಕ್ಕನ ಭಾವ: ಆಕೆ ಇವನ ನಾದಿನಿ. ಹೀಗಿದೆ ಉಭಯತರ ನಂಟು.

(೧೨ನೇ ಪುಟ ನೋಡಿರಿ)



# ಸಮಸ್ಯೆ ಸಮಾಧಾನ!

**—ರವೀಂದ್ರ, ಶಿವಮೊಗ್ಗ.**

❋ ವಿಶ್ವಕ್ಕೆಲ್ಲ ದೇವನು ಒಬ್ಬನೇ ಇದ್ದರೆ ಹಿಂದು, ಮುಸ್ಲಿಂ, ಕ್ರೈಸ್ತ, ಪಾರಸಿ, ಲಿಂಗಾಯತ ಹೀಗೆ ವಿವಿಧ ಧರ್ಮಗಳು ಏಕಾದವು ?

* ಮೋಡದಿಂದ ಬಿದ್ದ ನೀರು ಒಂದೇ ಇದ್ದರೂ ಭೂಮಿಯ ಗುಣಕ್ಕನುಸರಿಸಿ ಬೇರೆ ಬೇರೆ ರುಚಿ ತಾಳುವಂತೆ, ವಿವಿಧ ಜನಾಂಗಗಳ ಸಂಸ್ಕೃತಿ, ನೆಲದ ವಾತಾವರಣ ಮುಂತಾದವುಗಳ ಪ್ರಭಾವದಿಂದ ದೈವೀಜ್ಞಾನವೂ ವ್ಯತ್ಯಾಸ ಹೊಂದಿರುತ್ತದೆ.

**—ಸುಮಿತ್ರ, ಗುಡ್ಡೇಕೊಪ್ಪ.**

❋ ಬದುಕಿಗೆ ಹೆದರಿ ಸಾಯುವುದು ಉತ್ತಮವೋ, ಸಾವಿಗೆ ಹೆದರಿ ಬದುಕುವುದು ಉತ್ತಮವೋ ? ಯಾರು ಧೈರ್ಯಶಾಲಿಗಳೆಂದು ತಿಳಿಸುವಿರಾ ?

* ಮೊದಲನೆಯದು ಹೇಡಿತನ, ಎರಡನೆಯದು ನಿರ್ಜೀವತ್ವ. ಈ ಎರಡೂ ಉತ್ತಮವಲ್ಲ. ಬದುಕಿನಲ್ಲಿ ವಿಶಿಷ್ಟಗುರಿ ಇರಿಸಿಕೊಂಡು, ಅದರ ಸ್ಥಾಪನೆಗಾಗಿ ಹೋರಾಡಿ ಬದುಕುವುದು ಉತ್ತಮೋತ್ತಮ.

**— ಹೆಸರು ಬೇಡ, ಊರು ಮೊದಲೇ ಬೇಡ.**

❋ ನನ್ನ ಮಿತ್ರನಿಗಾಗಿ ಹೆಣ್ಣುನೋಡಲು ಹೋಗಿದ್ದೆವು. ಹುಡುಗಿಯು ತಾಯಿ-ತಂದೆಯರಿಗೆ ಮೆಚ್ಚುಗೆಯಾಯ್ತು. ಆದರೆ ವರನು "ನಾನು ಆಕೆಯು 'ನಾಚಿ ತಲೆತಗ್ಗಿಸಿದುದರಿಂದ ಕಣ್ಣುಗಳನ್ನು ಸರಿಯಾಗಿ ನೋಡಲಿಲ್ಲ. ನೋಡದ ತನಕ ಒಪ್ಪಿಕೊಳ್ಳೆನು" ಎಂದು ಹಟ ಹಿಡಿದಿದ್ದಾನೆ. ಈಗ ತಮ್ಮ ಸಲಹೆಗಾಗಿ ಕಾಯುತ್ತಿದ್ದೇವೆ.

* "ಉಗುರಿನಲ್ಲಿ ಹೋಗುವದಕ್ಕೆ ಕೊಡಲಿ ತೆಗೆದುಕೊಂಡರು" ಎಂಬ ಗಾದೆಗೆ ತುಂಬಾ ಸರಿಹೊಂದುವಂತಿದೆ ಇದು. ಇಷ್ಟು ಕ್ಷುಲ್ಲಕ ಸಮಸ್ಯೆಯನ್ನು ಎಷ್ಟು ದೊಡ್ಡದಾಗಿ ಬೆಳೆಸಿದ್ದೀರಿ. ಇನ್ನೊಂದು ಸಲ ನೋಡಿ "ಕಣ್ಣುಗಳನ್ನು" ಖಚಿತ ಪಡಿಸಿಕೊಂಡು ಬರಲಿ. ವಿನಾ ಕಾರಣ ನಾಳೆ ತಂದೆ-ತಾಯಿಗಳನ್ನು ದೂರುವಂತಾಗದಿರಲಿ.

**—ಉಷಾದೇವಿ, ಪುತ್ತೂರು.**

❋ ತುರ್ತು ಪರಿಸ್ಥಿತಿಯಲ್ಲಿ ನಡೆದ ದೌರ್ಜನ್ಯಗಳನ್ನು ಓದಿದಾಗ ನಿಮಗೆ ಏನನ್ನಿಸುತ್ತೆ?

* ಮನುಷ್ಯನಿಗೆ ಅಧಿಕಾರಲಾಲಸೆ, ಸ್ವಾರ್ಥ ಬೆನ್ನಿಗಂಟಿದಾಗ ಅವನು ಯಾವ ದೌರ್ಜನ್ಯ ಮಾಡಲಿಕ್ಕಾದರೂ ಇಳಿಯಬಲ್ಲ ಎಂದರಿತು ಆಶ್ಚರ್ಯವಾಗುತ್ತೆ.

**—ಬಸವಕುಮಾರ ಕೊಳಾರ, ಬೀದರ.**

✳ "ನಡುವೆ ಸುಳಿವ ಆತ್ಮ ಹೆಣ್ಣು ಅಲ್ಲ, ಗಂಡು ಅಲ್ಲ." "ಹೆಣ್ಣು ಸಾಕ್ಷಾತ್ ಕಪಿಲ ಸಿದ್ಧ ಮಲ್ಲಿಕಾರ್ಜುನ" ಎಂಬ ಶರಣರ ವಾಣಿ ಇದ್ದೂ ಸಹ ಸ್ತ್ರೀಯರಿಗೆ ಗುರುವಾಗಿ ದೀಕ್ಷೆ ಕೊಡುವ ಹಕ್ಕಿಲ್ಲ ಎನ್ನುವ ಗುರುಗಳ ಸಂಖ್ಯೆ ಇದ್ದೇ ಇದೆಯಲ್ಲಾ ?

* ದೀಕ್ಷೆ ಕೊಡುವ ಹಕ್ಕು ತಮಗಷ್ಟೇ ಎಂದು ಅಂಥವರು ಪಟ್ಟಭದ್ರರಾಗಿ ಕುಳಿತು ಕೊಳ್ಳಲಿ. ತನ್ನ ಕೋಳಿ ಇಲ್ಲದಿದ್ದರೆ ಬೆಳಕು ಹರಿಯದು ಎಂದು ಕಾಡಿಗೆ ಹೋಗಿ ಕುಳಿತು, ಇದ್ದೊಂದು ಕೋಳಿಯನ್ನೂ ನರಿಬಾಯಿಗೆ ಕೊಟ್ಟ ಜಂಬದ ಮುದುಕಿ ಯಂತೆ ಆ ಮಹನೀಯರು ಅನ್ನುತ್ತಿರಲಿ. ದಿನಾ ಬೆಳಕಾಗುತ್ತದೆ. ಅನೇಕ ಸಹಸ್ರಾರು ಮಂದಿ ಸ್ವಯಂಕೃತ ಅನುಭಾವಿ ಗುರುಗಳಿಂದ ಪ್ರವಚನ ಕೇಳಿ, ನೂರಾರು ಮಂದಿ ದೀಕ್ಷೆ ಪಡೆದು ಪಾರಮಾರ್ಥ ಪಥದಲ್ಲಿ ಸಾಗುತ್ತಲೇ ಇದ್ದಾರೆ. ಪರಿಸ್ಥಿತಿ, ಪ್ರಗತಿ, ವೈಚಾರಿಕತೆಗೆ ಹೊಂದಿಕೊಳ್ಳದವರು ತಮ್ಮ ಟೊಳ್ಳುವಿಚಾರ ಬಹಳಷ್ಟು ದಿನ ಮುಂದುವರಿಸಲಾರರು.

**ರಾಘವೇಂದ್ರ, ಶಿವಮೊಗ್ಗ.**

✳ ಬಸವಣ್ಣನವರು ಜನ್ಮತಃ ಬ್ರಾಹ್ಮಣರು. ವಿಶೇಷ ಕ್ರಾಂತಿಮಾಡಿದ ಯುಗ ಪುರುಷರು. ಏಕೆ ಅನೇಕ ಬ್ರಾಹ್ಮಣರಿಗೆ ಅವರ ಬಗ್ಗೆ ಅಭಿಮಾನ, ಆದರವಿಲ್ಲ ?

* ಬ್ರಾಹ್ಮಣರಿಗೆ ಅವರ ಬಗ್ಗೆ ಅಭಿಮಾನವಿಲ್ಲ ಎಂದು ನೀವೇಕೆ ತಿಳಿದಿರಿ. ಶ್ರೀಯುತರು ಗಳಾದ ಅ.ನ.ಕೃ., ಎಂ. ಆರ್. ಶ್ರೀನಿವಾಸಮೂರ್ತಿ, ರಂಗನಾಥ ದಿವಾಕರ್ ಮುಂತಾದವರು ಅದೆಷ್ಟು ಅಭಿಮಾನದಿಂದ ಸಾಹಿತ್ಯಕೃತಿ ಬರೆದಿರುವರು. ಇನ್ನು ಕೆಲವರು ಸಂಕುಚಿತವಾದಿಗಳಿಗೆ, ಬಸವಣ್ಣನವರು ಜಾತ್ಯತೀತತೆ ಹೇಳಿದ್ದು ಸಹ್ಯವಿಲ್ಲ. ಆದರೆ ಅವರುಗಳು ಬಸವಣ್ಣನವರನ್ನು ಅರಿಯುವ ಕಾಲ ಬರುತ್ತದೆ. ಬುದ್ಧ–ಮಹಾವೀರರಂತೆ ಹಿಂದೂ ಪರಂಪರೆಯ ಕಕ್ಷೆಯ ಹೊರಗೆ ಹೋಗದೆ' ಒಳಗಿದ್ದೇ ಜಾತೀಯತೆಯ ವಿರುದ್ಧ ಹೋರಾಡಿದ, ಮತಾಂತರವನ್ನು ಎಂದೋ ತಡೆಗಟ್ಟಲು ಬುನಾದಿ ಹಾಕಿಕೊಟ್ಟ ಹಿಂದೂಧರ್ಮದ ಅಧ್ವರ್ಯು ಬಸವಣ್ಣ ನವರೆಂದು ತಿಳಿಯುವರು.

✳ ನಾನೋರ್ವ ದಂಪತಿಗಳನ್ನು ಪೇಟೆಯಲ್ಲಿ ಕಂಡೆ. ಮಗುವನ್ನು ಗಂಡ ಎತ್ತಿ ಕೊಂಡಿದ್ದ. ಹೆಂಡತಿ ಸಾಮಾನು ಹಿಡಿದಿದ್ದಳು. ಹೀಗೆ ಗಂಡನಕೈಲಿ ಮಗುವನ್ನು ಹೊರಿಸಿಕೊಂಡು ಹೋಗುವುದು ತಪ್ಪಲ್ಲವೆ ?



* 9 ತಿಂಗಳಕಾಲ ಹೊತ್ತು, ಹೆತ್ತು ತಾಯಿ ನೀಡುವ ಮಗುವನ್ನು ತಂದೆಯಾದವನ್ನ ಎತ್ತಿಕೊಂಡು ಹೋದರೇನು ತಪ್ಪು. ಸಂಸಾರದಲ್ಲಿ ಈರ್ವರಿಗೂ ಸಮಪಾಲು.

**ಸುರೇಶ ಕೋರವಾರ, ನುಳ್ಳಿ.**

✳ ಸೃಷ್ಟಿಯು ತನ್ನ ರಚನೆಯಲ್ಲಿ ನೀಡಿರುವ ಶ್ರೇಷ್ಠವಾದ ಹಾಗು ವೈಶಿಷ್ಟ್ಯ ಪೂರ್ಣವಾದ ಕೊಡುಗೆ ಏನು ?

* ಮಾನವನ ಮೆದುಳು ಮತ್ತು ಅದರ ಚಿಂತನಶಕ್ತಿ.

**—ನಿರ್ಮಲಕುಮಾರಿ ಕೆ. ಎಸ್. ಕೆಂಕೆರೆ**

✳ ಲಿಂಗಾಯತ ಧರ್ಮದಲ್ಲಿಯೇ ಹುಟ್ಟಿ, ಅದರ ಹೆಸರು ಹೇಳುತ್ತಾ, ಆದರೂ ಲಿಂಗಧರಿಸದೆಯೆ ಹಲವಾರು ದೇವರುಗಳ ಉಪಾಸನೆಯಲ್ಲಿ ತೊಡಗುವವರಿಗೆ ಏನೆನ್ನಬೇಕು ?

* ಊಡುವ, ಉಡಿಸುವ ಗಂಡನು ಇದ್ದಂತೆಯೇ ಅವನನ್ನು ನಿರ್ಲಕ್ಷಿಸಿ ಪರಪುರುಷರ ಸುತ್ತಲೂ ಹರಿದಾಡುವ...... (ಪರಮ ಪತಿವ್ರತೆ !) ಎನ್ನಬೇಕು.

**—ಹೆಸರು ಬೇಡ, ಊರೂ ಬೇಡ.**

✳ ಬಸವ ಧರ್ಮದ ಅನುಯಾಯಿಗಳಾದ ಓರ್ವರು ಎಲೆಕ್ಷನ್‌ನಲ್ಲಿ ಗೆದ್ದುಬಂದು ದಕ್ಕಾಗಿ ತಿರುಪತಿಗೆ ಹೋಗಿ ತಲೆ ಅಲ್ಲಲ್ಲ ಕೂದಲು ನೀಡಿ, ಸತ್ಯನಾರಾಯಣ ವ್ರತ ಮಾಡಿ ವಿಶೇಷ ವಿಜಯೋತ್ಸವ ಆಚರಿಸಿದರು. ಇದು ಸ್ವಧರ್ಮಕ್ಕೆ ಸರಿಯೆ ?

* ಸ್ವಧರ್ಮ ಪಾಲನೆಯು ಅತ್ಯಂತ ಶೇಷ್ಠವೆಂದು ಗೀತೆಯು ನುಡಿದುದನ್ನು ಅರ್ಥ ಮಾಡಿಕೊಳ್ಳುವವರು ಎಷ್ಟು ಜನ ; ತಮ್ಮ ಧಾರ್ಮಿಕ ವೈಶಿಷ್ಟ್ಯ ಕಳೆದುಕೊಳ್ಳ ದೆಯೇ ಭಾರತೀಯ ರಾಜಕಾರಣದಲ್ಲಿ ಬಲವಾದ ಪಾತ್ರ ವಹಿಸುತ್ತಿರುವ ಇಸ್ಲಾಂ, ಕ್ರೈಸ್ತ ಬಂಧುಗಳನ್ನು ನೋಡಿಯಾದರೂ ಇವರು ಕಲಿಯಲಾರರು. ಜನರ ಪ್ರೇಮಗಳಿಸಿಕೊಳ್ಳಲು (ಅಥವಾ ಓಟು ಗಿಟ್ಟಿಸಲು) ಅಂತ್ಯತ ಧೀರರಾಗಿ ಧರ್ಮಾಭಿ ಮಾನ ಬಿಡುವವರಲ್ಲಿ ವೀರಶೈವರು ಮೊದಲಿಗರು.

**—ಚಂದ್ರಕಾಂತ, ಅವರಾದ.**

✳ ತೀರ್ಥ ಕ್ಷೇತ್ರಗಳಿಗೆ ಹೋಗಿ ಮುಡಿಯನ್ನು ಕೊಟ್ಟು ಬರುವರಲ್ಲಾ; ಆ ಕೂದ ಲನ್ನು ತೆಗೆದುಕೊಂಡು ದೇವರೇನು ಮಾಡುವನು, ಅದರಿಂದ ಭಕ್ತನೇನನ್ನು ಸಾಧಿಸುವನು ?

* ಮೂಢತೃಪ್ತಿ ಬಿಟ್ಟು ಮತ್ತೇನೂ ಇಲ್ಲ. ತಲೆಯನ್ನು ಬೆಳೆಸಲಾರದವರು ಬರೀ ಕೂದಲನ್ನು ಬೆಳೆಸಿಕೊಂಡು ತೃಪ್ತಿಪಡುವಂತೆ, ಮನಸ್ಸನ್ನು ದೌರ್ಬಲ್ಯ– ವಿಕಾರಗಳಿಂದ ಬೋಳು ಮಾಡಿಕೊಳ್ಳದವರು ತಲೆಯನ್ನಷ್ಟೇ ಬೋಳು ಮಾಡಿ ಕೊಳ್ಳುವರು.

—ನಾಗರಾಜ ಕೆ. ಎಸ್. ಶಿವಮೊಗ್ಗ.

⁕ ವಿಭೂತಿಯನ್ನು ಧರಿಸುವುದು ಏಕೆ ?

* ವಿಭೂತಿಯಾಗಲಿಕ್ಕೆ ! ಭೂತಿ ಬೇರೆ ವಿಭೂತಿಯು ಬೇರೆ. ಭೂತಿ ಎಂದರೆ ಇರುವುದು, ವಿಭೂತಿ ಎಂದರೆ ವಿಶೇಷವಾಗಿ ಇರುವುದು. ದೇಹ ಮಾನ ಪ್ರಾಣ ಗುಣ ಧಾರಿ ಭೂತಿ. ಇವುಗಳನ್ನು ಜ್ಞಾನದ ಅಗ್ನಿಯಲ್ಲಿ ದಹಿಸಿಕೊಂಡವನು ವಿಭೂತಿ. ಆಸ್ಥಿತಿಯ ಸಂಕೇತ ವಿಭೂತಿ ಧಾರಣೆ.

—ಸುಶೀಲಮ್ಮ ಕೃಷ್ಣಯ್ಯ, ಬೆಂಗಳೂರು.

⁕ ಷಡಕ್ಷರಿ, ಪಂಚಾಕ್ಷರಿ ಮಂತ್ರವೆಂದರೆ ಯಾವುದು ? ಏಕಾದಶಾಕ್ಷರಿ ಮಂತ್ರ ಯಾವುದು ? ಇವೆರಡರ ಉಲ್ಲೇಖ ವಚನಗಳಲ್ಲಿ ಆಗಾಗ ಬರುವುದಲ್ಲಾ !

* ನಮಃಶಿವಾಯ ಪಂಚಾಕ್ಷರಿ ಮಂತ್ರ, ಓಂ ನಮಃಶಿವಾಯ ಪ್ರಣವ ಸಹಿತ ಪಂಚಾಕ್ಷರಿ ಅರ್ಥಾತ್ ಷಡಕ್ಷರಿ, ಶ್ರೀಗುರು ಬಸವಲಿಂಗಾಯ ನಮಃ ಏಕಾದಶಾಕ್ಷರಿ. ಷಡಕ್ಷರಿಯು ದೇವಮಂತ್ರ, ಏಕಾದಶಾಕ್ಷರಿಯು ಗುರುಮಂತ್ರ.

—*_*—

(೮ನೇ ಪುಟದಿಂದ)

ಅರಿವಿನ ಸೂರ್ಯನಿಗೆ ಮುಚ್ಚಲು ಬಂದ ಅಜ್ಞಾನದ ಮೋಡದಿಂದಾಗಿ ಕಳವಳ, ದುಃಖ-ದುಮ್ಮಾನಗಳ ಮಂಕುಕವಿದಿದೆ ಮುಕ್ತಾಯಕ್ಕನಿಗೆ. ಪ್ರಭುವೆಂಬ ಅಧ್ಯಾತ್ಮ ವಾಯು ಬೀಸಿದರೆ, ಮುಕ್ತಾಯಕ್ಕನ ಮಂಕಿನ ಮೋಡ ಚದುರಿದರೆ ಮತ್ತೆ ಪರಮ ಪ್ರಕಾಶ, ಸಂತೃಪ್ತಿ. ಎಂತಹ ಆಳವಾದ ತತ್ವಜ್ಞಾನದಿಂದ ಪರಿಪ್ಲುತವಾಗಿದೆ ಈ ವಚನ. ದೇಹಭಾವವಿದ್ದ ಓರ್ವನನ್ನು ನೀನಾರು ಎಂದರೆ, "ಇಂಥ ತಾಯಿ ತಂದೆಯರ ಮಗ, ಜನ್ಮಸ್ಥಳವಿದು, ಜನ್ಮದಿನಾಂಕವಿದು" ಎನ್ನುವನು. ಆದರೆ ಪ್ರಭುವು ಆತ್ಮಭಾವ ಸಂಯುಕ್ತನಾದುದರಿಂದ ದೇಹಸೂಚಕ ಶಬ್ದಗಳನ್ನಾಡದೆ ಆತ್ಮದ ಉಗಮವನ್ನು ಕುರಿತಾದ ವಿಶ್ವೋತ್ಪತ್ತಿ ಶಾಸ್ತ್ರವನ್ನು ಹೇಳುವನು.

ಪಂಚಭೂತಾತ್ಮಕ ಪ್ರಕೃತಿ, ಸೃಷ್ಟಿ ರೂಪುಗೊಳ್ಳುವ ಮುನ್ನ ಸ್ವಯಂಭುವಾದ ಪರಮಾತ್ಮನು ಇದ್ದ. ಅವನಲ್ಲಿ ಸೃಷ್ಟಿಯನ್ನು ರಚಿಸುವ ಆಕಾಂಕ್ಷೆ ಮೂಡಿದಾಗ ಹುಟ್ಟಿದಳು ಶಕ್ತಿ. ಶಕ್ತಿಯು ವಿಕಾಸದಿಂದ ಪ್ರಕೃತಿ ; ಅದರೊಳಗೆ ಸೇರಿ ಭವಚಕ್ರ ದೊಳಕ್ಕೆ ನುಸುಳಿದ ಶಿವಾಂಶವೇ ಆತ್ಮ. ಆದ್ದರಿಂದ ತಾನಾರೆಂಬ ಪ್ರಶ್ನೆಗೆ 'ಆತ್ಮ' ಎಂಬ ಉತ್ತರ. ಅದು ಎಲ್ಲಿಂದ ಬಂದುದು ಎಂಬುದಕ್ಕೆ ಶಿವನೆಂಬ ಮೂಲಸಿಂಧುವಿನಿಂದ ಸಿಡಿದ ಬಿಂದುವೆಂದು, ಎಲ್ಲಿಗೆ ಹೋಗುವದೆಂಬ ಪ್ರಶ್ನೆಗೆ ಗುಹೇಶ್ವರನ ಕೈಹಿಡಿದು ಸಂಪೂರ್ಣ ಸಮರಸ ಹೊಂದಿ ಪರಮಸುಖಿಯಾಗುವದಕ್ಕೆ ಎಂಬ ಉತ್ತರ ಮಾರ್ಮಿಕ ಮತ್ತು ತಾತ್ವಿಕವಾಗಿ ಇಲ್ಲಿ ಬಂದಿವೆ. ಧರ್ಮದ ಮೂಲಭೂತ ಸಮಸ್ಯೆಗೆ ಬೆಡಗಿನ ಭಾಷೆಯಲ್ಲಿ ಉತ್ತರ ನೀಡಿದ ಪ್ರಭುವಿನ ವಚನ ಅಚ್ಚರಿಯ ಸರಸಿಯಲ್ಲಿ ಮೀಯಿಸಿ, ಆನಂದದ ತಂಗಾಳಿಯನ್ನು ಸೋಂಕಿಸದಿರದು. ★



# ಸ್ಫುರಣ-ಕಿರಣ

—ಸಂ: ಮಾತಾಜಿ.

ಬೆಂಗಳೂರಿನಿಂದ ಮುಂಬಯಿಗೆ ವಿಮಾನದಲ್ಲಿ ಪ್ರಯಾಣಿಸುತ್ತಿದ್ದೆ. ಅತ್ಯವಸರದ ಕೆಲಸವಿದ್ದುದರಿಂದ ಮತ್ತು ಮರುದಿನವೇ ವಾಪಸ್ಸಾಗ ಬೇಕಾಗಿದ್ದುದರಿಂದ ವಿಮಾನ ಯಾನ ಕೈಗೊಳ್ಳಲಾಗಿತ್ತು. ಟಿಕೆಟ್ ಬುಕ್‌ಮಾಡಲು ಹೋದವರು ಅವಸರದಿಂದ ನೇರವಾದ ಏರ್‌ಬಸ್ ರಿಸರ್ವೇಷನ್ ಬದಲು ಗೋವಾದ ಮೂಲಕ ಹೋಗುವ ವಿಮಾನಕ್ಕೆ ರಿಸರ್ವ್ ಮಾಡಿದ್ದರು. "ಜೋ ಕುಚ್ಛ್ ಹುವಾ ಅಚ್ಛಾ ಹುವಾ" ಎಂಬಂತೆ, ಸಮುದ್ರ ತೀರದಲ್ಲೇ ಪಯಣಿಸುವ ಸುಯೋಗ ಒದಗಿತು.

ಇಡೀ ಸಮುದ್ರದ ನೋಟ. ನದಿಗಳು ಫಳಫಳನೆ ನಡುಬಿಸಿಲಿನಲ್ಲಿ ಮಿಂಚುತ್ತ, ನಡು ಬಳುಕಿಸುತ್ತಾ ಹರಿದು ಸಮುದ್ರವನ್ನು ಸೇರುವ ದೃಶ್ಯ ಮನೋಹರ. ಗೋವೆಯ ಸಮುದ್ರವನ್ನು ಕಾಣುವುದಕ್ಕೂ ಮೊದಲೇ ಅಲ್ಲಲ್ಲೇ ದಟ್ಟವಾದ ವನಸಂಪತ್ತು ಮೇಲಿನಿಂದ ನೋಡುವಾಗ ನೆಲಕ್ಕಂಟಿದಂತೆ ಕಾಣುವ ಹಸಿರು ರಮಣೀಯ. ಉಳವಿ, ಲೋಂಡಾ ಕಡೆ ನಾವು ಕಾಡಿನಲ್ಲಿ ಕಾರಿನಲ್ಲಿ ಹೋಗುವಾಗ ಬೃಹದಾಕಾರವಾಗಿ, ಮುಗಿಲು ಮುಟ್ಟುವಂತೆ ಕಾಣುತ್ತಿದ್ದ ಗಿಡಗಳು ವಿಮಾನದಲ್ಲಿ ಕುಳಿತು ಕೆಳಗೆ ನೋಡಿದಾಗ ಕುಬ್ಜವಾಗಿ ನೆಲಕಚ್ಚಿದಂತೆ ಕಾಣುತ್ತಿದ್ದವು.

ಆಗ ನನಗೊಂದು ವಿಚಾರ ಸ್ಫುರಿಸಿತು. ಮಾನವನು ಕೆಳಗಿನ ಮಟ್ಟದಲ್ಲಿ ಮಾನಸಿಕ ಸ್ಥಿತಿ ಇದ್ದಾಗ ಜೀವನದ ವಿಪತ್ತುಗಳು, ವಿಘ್ನಗಳು ಭಯಂಕರವಾಗಿ ಮತ್ತು ಬೃಹದಾಕಾರವಾಗಿ ಕಾಣುವವು. ಮಾನಸಿಕವಾದ ಜ್ಞಾನದ ಮಟ್ಟ ಏರುತ್ತ ಏರುತ್ತ ಆತ್ಮಾನುಭೂತಿಯ ನಿಲುವಿನಲ್ಲಿ ನಿಂತಾಗ ಅದೇ ವಿಪತ್ತು-ವಿಘ್ನಗಳು ಕ್ಷುಲ್ಲಕ ಮತ್ತು ಕುಬ್ಜವಾಗಿ ತೋರುವವು.

## ಅತಿ ದುಡಿತ-ಅತಿ ಆಲಸ್ಯ

ಸಂಸ್ಥೆಯಲ್ಲಿ ಎರಡು ಕಾರುಗಳಿದ್ದು ಒಂದು ಸಾಕಷ್ಟು ಕೆಲಸ ಮಾಡಬೇಕಾದ ಕಾರಣ ಚೆನ್ನಾಗಿ ಸವೆದು ಸವೆದು ಆಗಾಗ ರಿಪೇರಿಗೆ ಒದಗುತ್ತಿರುತ್ತದೆ. ಇನ್ನೊಂದು

ಯಾವಾಗಲಾದರೊಮ್ಮೆ ಓಡುವ ಕಾರಣ, ಹೆಚ್ಚಾಗಿ ನಿಂತಿರುವದರಿಂದ ಬ್ಯಾಟರಿ ಡಲ್ ಆಗಿ ಆಗಾಗ ರೀಛಾರ್ಜು ಮಾಡಿಸಬೇಕಾಗುತ್ತೆ. ಹಾಗೆ ಅತೀ ಓಡಿದರೂ ಖರ್ಚು, ನಿಲ್ಲಿಸಿದರೂ ಖರ್ಚು ಎಂದು ಆಶ್ರಮದವರು ಹೇಳಿದರು. ಆಗ ಒಂದು ವಿಚಾರ ಸ್ಫುರಿಸಿತು ನನಗೆ. ಮಾನವನ ಶರೀರವಾದರೂ ಅಷ್ಟೇ; ಊಟ ನಿದ್ರೆಗಳ ಪರಿವೆಯಿಲ್ಲದೆ ಅತೀ ದುಡಿತ ಮಾಡಿದಾಗ ರೋಗರುಜಿನ-ದುರ್ಬಲತೆ ಬರುತ್ತವೆ. ಏನೇನೂ ದುಡಿಯದೆ ತಿನ್ನುತ್ತ-ಉಣ್ಣುತ್ತ ಕುಳಿತರೆ ಶರೀರದ ಕೋಶಗಳು ದುರ್ಬಲಗೊಂಡು ಕೊಬ್ಬು ಸೇರಿ ತುಂಬಾ 'ಡಲ್' ಆಗುತ್ತಾನೆ ಮನುಷ್ಯ.

* * * *

ಒಂದು ದಿನ (ನಮ್ಮ ಪ್ರಯಾಣವು) ಚಿಕ್ಕಮಗಳೂರು ನಗರದಿಂದ ಚಾಮರಾಜ ನಗರಕ್ಕೆ ಹೊರಟಿದ್ದೆವು. ಸೂರ್ಯಾಸ್ತವಾಗುತ್ತಿತ್ತು. ಸೂರ್ಯನ ಹೊಂಬಣ್ಣವು ಹೊಲ-ಗದ್ದೆಗಳನ್ನು ಆಲಂಗಿಸಿ, ನಾಚಿಸಿತ್ತು. ತಂಗಾಳಿ ಹಿತವಾಗಿ ಬೀಸುವುದರೊಡನೆ ಹಸಿರು ಸೀರೆಯುಟ್ಟ, ಬತ್ತದಿಂದ ತುಂಬಿದ ಧರಿತ್ರಿ ಬೆಸಲೆಯಾಗಿ ನಿಂತಿದ್ದಳು. ಕಾವೇರಿ, ಹೇಮಾವತಿ, ಕಪಿನಿ ಮುಂತಾದ ಅನೇಕ ನದಿಗಳು ಮಾರ್ಗಮಧ್ಯೆ ಕಂಡವು. ನದಿಗಳು ಹರಿದಲ್ಲಿ, ಕಾಲುವೆಗಳು ನಿರ್ಮಾಣವಾದಲ್ಲಿ ಹಸಿರು ಮಡುಗಟ್ಟಿ ನಿಂತಿತ್ತು. ಅದನ್ನು ಆಸ್ವಾದಿಸುತ್ತ ನಾನು ಹೇಳಿದೆ: "ನೀರು ಹರಿದಿದೆ ಎಂದು ಯಾರಾದರೂ ಹೇಳುವ ಮುನ್ನವೇ ಈ ಹಸಿರು ಅದಕ್ಕೆ ಸಾಕ್ಷಿ ನುಡಿಯುತ್ತದೆ. ನೀರು ಹರಿದಲ್ಲಿ ಹಸಿರು ಕಣ್ಣಿಗೆ ಹಬ್ಬವಾಗಿ ತೋರುತ್ತದೆ. ಅದೇ ರೀತಿ ಜ್ಞಾನಗಂಗೆಯು ಹರಿದಾಗ, ಪ್ರವಚನ ಧಾರೆ ಸುರಿದಾಗ ಜನಗಳ ಮೊಗದ ಮೇಲೆ ದೈವೀಕಳೆ, ಧರ್ಮ ಲಾಂಛನ ಧಾರಣೆ, ಪ್ರಾರ್ಥನೆ, ಭಜನೆಗಳ ಪಠಣೆ ಮುಂತಾದ ದೈವೀ ಸಂಪತ್ತು ಕಾಣಬರುವುದು."

## ಅತ್ತೆ ಮತ್ತು ತಾಯಿಯ ದೃಷ್ಟಿ

ಒಂದು ದಿನ ಒಂದು ಪ್ರಸಂಗ ನಡೆಯಿತು. ತಮ್ಮ ಮನೆಯ ಒಂದು ವಿರಸ ಘಟನೆಯನ್ನು ತಂದಿದ್ದರು, ಓರ್ವ ಅತ್ತೆ, ತಾಯಿ ಮತ್ತು ಅವರ ಮಗಳು ಬಂದಿದ್ದರು: ಅತ್ತೆ ತನ್ನ ಸೊಸೆಯ ತಪ್ಪುಗಳನ್ನು ಎತ್ತಿ ಆಡಿ ದೂಷಿಸುತ್ತಿದ್ದಳು; ತಾಯಿ ತನ್ನ ಮಗಳ ಗುಣಗಾನವನ್ನು ಮಾಡುತ್ತ ಒಳ್ಳೆಯತನವನ್ನು ಸಮರ್ಥಿಸಿಕೊಳ್ಳುತ್ತಿದ್ದಳು.

ಆಗ ಪೂಜ್ಯರಾದ ಸದ್ಗುರು ಲಿಂಗಾನಂದ ಸ್ವಾಮಿಗಳು ಎಲ್ಲರಿಗೂ ಸರಿಯಾಗಿ ಬುದ್ಧಿವಾದವನ್ನು ಹೇಳಿ ವಿರಸ ಪ್ರಸಂಗಗಳನ್ನು ಬಗೆಹರಿಸಿದರು. ಆ ನಂತರ ನುಡಿದರು "ಅತ್ತೆ ಮತ್ತು ತಾಯಿ ಇಬ್ಬರ ದೃಷ್ಟಿಕೋನಗಳಲ್ಲಿ ವ್ಯತ್ಯಾಸವಿದೆ. ಅತ್ತೆಯು ಸೊಸೆ ಎಂಬ ದೃಷ್ಟಿಕೋನದಿಂದಲೇ ನೋಡುವುದರಿಂದ ಆಕೆಯ ಒಳ್ಳೆಯ ಕಾರ್ಯಗಳೂ ಕೆಟ್ಟದಾಗಿ ಕಾಣಬಹುದು. ಅಥವಾ ಆಕೆಯ ಒಳ್ಳೆಯ ಗುಣಗಳೆಲ್ಲ ಮರೆಯಾಗಿ,

(೧೫ನೇ ಪುಟ ನೋಡಿರಿ)



ಕೆಟ್ಟವೇ ಕಾಣಬಹುದು. ಆದರೆ ತಾಯಿಯ ಗುಣ ಹಾಗಲ್ಲ. ತನ್ನ ಮಗಳೆಂಬ ದೃಷ್ಟಿಕೋನದಿಂದ ಆಕೆ ತನ್ನ ಮಗಳಲ್ಲಿ ಸದ್ಗುಣಗಳನ್ನೇ ಕಾಣುವಳು. ಮತ್ತು ಕೆಲವು ಕೆಟ್ಟ ಗುಣಗಳೂ ಒಳ್ಳೆಯವಾಗಿ ಕಾಣುವುವು. ದೃಷ್ಟಿಯಂತೆ ಸೃಷ್ಟಿ, ತನ್ನ ಭಾವದಂತೆ ಇತರರೂ ಕಾಣುವರು. ಅದೇ ರೀತಿ ಜಗತ್ತಿನಲ್ಲಿ ದೋಷೈಕ ದೃಷ್ಟಿಯೊಂದು ಅತ್ತೆಯ ದೃಷ್ಟಿಯಂತೆ, ಗುಣೈಕ ದೃಷ್ಟಿ ಇನ್ನೊಂದು ತಾಯಿಯ ದೃಷ್ಟಿಯಂತೆ ಮೊದಲನೆಯದು ದೋಷವನ್ನೇ ಹುಡುಕಲು ಬಯಸುತ್ತದೆ. ಎರಡನೆಯದು ಗುಣವನ್ನೇ ಅರಸಲು ಬಯಸುತ್ತದೆ,"

*

(೬ನೇ ಪುಟದಿಂದ)

ಹಣವನ್ನು ಅಧಿಕವಾಗಿ ವ್ಯಯಿಸಿ ಗದ್ದುಗೆಗೆ, ಹುದ್ದೆಗೆ ಏರುವ ವ್ಯಕ್ತಿ ತಾನು ಮಾಡಿದ ಇನ್‌ವೆಸ್ಟ್‌ಮೆಂಟ್ ಬಡ್ಡಿ ಸಹಿತ ವಾಪಸ್ಸಾಗುವ ತನಕ ನೆಮ್ಮದಿಯಿಂದಿರಲಾರ; ಇನ್ನು ಇಂಥವರಲ್ಲಿ ಸೇವೆಯ ಆದರ್ಶವಂತೂ ಗಾಳಿಗೊಡ್ಡಿದ ಸೊಡರು.

ನಮ್ಮ ನಾಡಿನ ಬುದ್ಧಿಮಟ್ಟದ ಕುಸಿತ, ಶೈಕ್ಷಣಿಕ ಮಟ್ಟದ ಇಳಿತವೂ ಅಧಿಕಗೊಳ್ಳುತ್ತಿದೆ. ಉಪಜೀವನದ ವಿದ್ಯೆ ಮತ್ತು ಜೀವನದ ವಿದ್ಯೆಗಳೆರಡೂ ಪ್ರಸ್ತುತ ಶಿಕ್ಷಣದಲ್ಲಿ ದೊರೆಯುತ್ತಿಲ್ಲ. ಮೊನ್ನೆ ಯಾರೋ ಹೇಳುತ್ತಿದ್ದರು: "Many are unemployed. For they are unemployable." ಅರ್ಜಿ ಪತ್ರಗಳನ್ನು ಪರಿಶೀಲಿಸುತ್ತಿದ್ದರೆ ತುಂಬಾ ಬೇಸರ. ಬರವಣಿಗೆಯಲ್ಲಿ ಸ್ಪಷ್ಟತೆ ಹಸ್ತ ಬರಹದ ಸೌಂದರ್ಯ ಅದರಲ್ಲಿ ವಿಚಾರವಂತಿಕೆ ಅತ್ಯಲ್ಪ. ಇಂತಹವರುಗಳು ಸರ್ಕಾರಿ ನೌಕರಿಯಲ್ಲಿ ಹೇಗೋ ಪಾರಾಗಬಲ್ಲರಲ್ಲದೇ ವ್ಯಕ್ತಿಗತ ಸಂಘ-ಸಂಸ್ಥೆಗಳಲ್ಲಿ ಪೂರೈಸುವದೇ ಕಠಿಣ. ಪದವೀಧರ ಶಿಕ್ಷಣ ಪಡೆದ ವ್ಯಕ್ತಿ ಆ ಸಂಬಳ ನಿರೀಕ್ಷಿಸುವುದು ಸ್ವಾಭಾವಿಕ. ಆದರೆ ಅಷ್ಟೇ ಗುಣಮಟ್ಟದ ಕೆಲಸವನ್ನಾತ ನಿರ್ವಹಿಸಲಾರ. ಕಾರಣವೆಂದರೆ ಸಮರ್ಪಕವಾದ ಮತ್ತು ವೃತ್ತಿಗೆ ಅವಶ್ಯಕವಾದ ತರಬೇತಿ ಅವನಿಗೆ ಇಲ್ಲದಿರುವದು. ಆಂಗ್ಲ ಭಾಷೆಯಲ್ಲಿ ಒಂದು ಅರ್ಜಿಗುಜರಾಯಿಸುವುದಾಗಲೀ ಅಥವಾ ಒಳ್ಳೆಯ ಪತ್ರ ವ್ಯವಹಾರವಾಗಲೀ ಮಾಡಲಾಗದ ಪದವೀಧರನನ್ನು ಅಭ್ಯರ್ಥಿಯನ್ನಾಗಿ ಆಯ್ಕೆ ಮಾಡುವುದು ಬಹಳ ಕಷ್ಟವೆನಿಸುತ್ತದೆ.

ಇನ್ನು ಉಪಜೀವನಕ್ಕಷ್ಟೇ ಅಲ್ಲದೆ ಜೀವನದ ತೃಪ್ತಿ ನೀಡಲು ಸಹಾಯಕವಾಗುವ ಜೀವನದ ವಿದ್ಯೆಯನ್ನು ಅರ್ಥಾತ್ ನೈತಿಕ ಮತ್ತು ಅಧ್ಯಾತ್ಮಿಕ ಮೌಲ್ಯಗಳ ಶಿಕ್ಷಣವನ್ನು ಕೊಡದಿರುವ ಕಾರಣ, "ಕಾಯಕದಲ್ಲಿ ಮೇಲು-ಕೀಳೆಂಬುದಿಲ್ಲ. ಎಲ್ಲವೂ ಬಾಳ ಪರಿಪೂರ್ಣತೆಗೆ ಸಹಾಯಕ" ಎಂಬ ಮನೋಭಾವ ಅಳವಟ್ಟಿರುವದಿಲ್ಲ. ಹೀಗೆ ವೈವಿಧ್ಯ ಕಾರಣಗಳಿಗಾಗಿ ಕರಾಳ ಭವಿಷ್ಯವನ್ನೆದುರಿಸುವ ಯುವಜನಾಂಗ ಮತ್ತು ದೇಶದ ವಿಚಿತ್ರ ಪರಿಸ್ಥಿತಿಗೆ ಕಾರಣಗಳೇನೆಂಬುದನ್ನು ಕಂಡು ಹಿಡಿದು ಪರಿಹಾರವನ್ನೊದಗಿಸುವುದು ಇಂದಿನ ಸಮಾಜ ವಿಜ್ಞಾನಿಗಳು ಮತ್ತು ಶಿಕ್ಷಣ ತಜ್ಞರ ಪ್ರಮುಖ ಕರ್ತವ್ಯ.

— ಮಾತೆ ಮಹಾದೇವಿ

## ಮಾರ್ಚಿ ಮತ್ತು ಏಪ್ರಿಲ್ ತಿಂಗಳಲ್ಲಿ ೧೫೧-೦೦ ರೂ ಸಲ್ಲಿಸಿ ಕಲ್ಯಾಣ ಕಿರಣಕ್ಕೆ ಆಜೀವ ಸದಸ್ಯರಾದವರು.

೧. ಶರಣ ಕೆ. ಎನ್. ಮಹಾದೇವಯ್ಯ, ಕೋಡಿಹಳ್ಳಿ.
೨. ಶರಣೆ ಗೌರಮ್ಮ, ಕೆ/ಆ ಎನ್. ಬಿ. ಬಸಪ್ಪ ರಾಜಾಜಿನಗರ, ಬೆಂಗಳೂರು.
೩. ಶರಣೆ ಗೌರಮ್ಮ, ಜಯನಗರ, ಬೆಂಗಳೂರು.
೪. ಶರಣ ಜಿ. ಎಂ. ನಂದೀಶಪ್ಪ ಮತ್ತು ಪಿಳ್ಳಮ್ಮ, ಜಯನಗರ, ಬೆಂಗಳೂರು.
೫. ಶರಣೆ ಗೌರಮ್ಮ ಎಂ. ಕೃಷ್ಣಮೂರ್ತಿ, ಜಯನಗರ, ಬೆಂಗಳೂರು.
೬. ಶರಣೆ ಕೆ.ಪಿ.ಸುಶೀಲಾ ಪುಟ್ಟರಂಗಯ್ಯ ಶೆಟ್ಟಿ, ನ್ಯೂತರಗುಪೇಟೆ, ಬೆಂಗಳೂರು.
೭. ಶರಣ ಸಿ. ರಾಮಶೆಟ್ಟಿ, ಜಯನಗರ, ಬೆಂಗಳೂರು.
೮. ಶರಣೆ ಚಿನ್ನಮ್ಮ ಶಿವನಂಜೇಗೌಡ, ಬೆಂಗಳೂರು.
೯. ಶರಣ ಕೃಷ್ಣ ಚಿದಂಬರ, ಶ್ರೀ ನಾರಾಯಣ ಭಟ್ಟರ ಮಕ್ಕಳು, ಬೆಂಗಳೂರು.
೧೦. ಶರಣೆ ವೆಂಕಟಲಕ್ಷ್ಮಮ್ಮ ಶಾಮಣ್ಣ, ಜಯನಗರ, ಬೆಂಗಳೂರು.
೧೧. ಶರಣ ಎ. ಎಂ. ಬಸವೇಗೌಡರು, ಚಿಕ್ಕಮಗಳೂರು.
೧೨. ಶರಣ ಹೆಚ್. ಎಂ. ಶೇಖರಪ್ಪ, ಚಿಕ್ಕಮಗಳೂರು.
೧೩. ಶರಣ ಎ. ಎಂ. ಸೋಮೇಗೌಡರು, ಚಿಕ್ಕಮಗಳೂರು,
೧೪. ಶರಣ ಜಿ. ಬಿ. ಬಸವೇಗೌಡರು, ಚಿಕ್ಕಮಗಳೂರು.
೧೫. ಶರಣ ಸಿ. ವಿ. ಶಿವರುದ್ರಪ್ಪ, ಚಿಕ್ಕಮಗಳೂರು.
೧೬. ಶರಣ ಎಂ. ಸದಾಶಿವ ಶೆಟ್ಟರು, ಚಿಕ್ಕಮಗಳೂರು.
೧೭. ಶರಣ ಎ. ಸಿ. ಪ್ರಭುರಾಜ ಶೇಖರ, ಉಳಿಗೆರೆ ಎಸ್ಟೇಟ್.
೧೮. ಶರಣ ಸಿ. ಚಂದ್ರಶೇಖರ್, ಟಿಂಬರ್ ಮರ್ಚೆಂಟ್, ಚಿಕ್ಕಮಗಳೂರು.

❋

## ಬಸವ ಗಂಗೋತ್ರಿಗೆ ಸಹಾಯ ಸಲ್ಲಿಸಿದವರು

೧. ಶರಣ ನಿಂಗಪ್ಪ ಮೋಟೆ, ಜಯನಗರ, ಬೆಂಗಳೂರು. ೧೦೦೨-೦೦
೨. ಶರಣೆ ನಾಗರತ್ನಮ್ಮ ಲಕ್ಷ್ಮಿನಾರಾಯಣಯ್ಯ ೫೦೨-೦೦
೩. ಶರಣ ಜೆ. ನರಸಿಂಹೇಗೌಡ, ಆಡುಗೋಡಿ. ೨೦೧-೦೦
೪. ಶರಣ ಸಂಗಪ್ಪ ಸಜ್ಜನ, ಜವಳಗೇರಿ. ೨೦೧-೦೦
೫. ಗುಪ್ತ ಕಾಣಿಕೆ. ೫೦೦೧-೦೦



# ಒಂದು ನಗೆಬರಹ

—ಗುರುಪಾದ ಸೊರಗೊಂಡ.

**ಆಕಾಶವಾಣಿ** ನೆಲಮಂಗಲ, ನಾಗಮಂಗಲ, ಜಾಲಹಳ್ಳಿ ಮತ್ತು ಶಿವನಳ್ಳಿ.

ಈಗ ವೇಳೆ 33 ಗಂಟೆ 66 ನಿಮಿಷ 99 ಸೆಕಂಡುಗಳಾಗಲಿವೆ.

ಇನ್ನು ಕೆಲವೇ ಗಂಟೆಗಳಲ್ಲಿ ನಮ್ಮ ಮುಂದಿನ ಕಾರ್ಯಕ್ರಮ ಪ್ರಾರಂಭವಾಗಲಿದೆ.

ಇದು ಅಡುಗೆಮನೆ ಕೇಂದ್ರದ ಸಹಪ್ರಸಾರ,

ತರಂಗಾಂತರ ೦೦೦೦೦

ಶಿವರಾತ್ರಿಯ ವಿಶೇಷ ವಾರ್ತೆಗಳು.

ಓದುತ್ತಿರುವವರು ಶ್ರೀಮತಿ S. ಗುರುಪಾದ.

**ಮುಖ್ಯಾಂಶಗಳು :**

1. ಮೊನ್ನೆ ನಡೆದ ವಿಧಾನ ಸಭಾ ಚುನಾವಣೆಯಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಪಕ್ಷ (R)ವು ಎರಡು ಸ್ಥಾನಗಳನ್ನು ಪಡೆದು ಪ್ರಚಂಡ ಬಹುಮತಗಳಿಸಿತು. ಇನ್ನು ಕೆಲವೇ ವರ್ಷಗಳಲ್ಲಿ ಆ ಪಕ್ಷವು ತನ್ನ ನಾಯಕನನ್ನು ಆಯ್ಕೆಮಾಡಿ ಮಂತ್ರಿ ಮಂಡಳ ವನ್ನು ರಚಿಸುವದೆಂದು ವರದಿಯಾಗಿದೆ.

2. ಇಂದು ಬೆಳಗ್ಗೆ ಪ್ರಕಾಶನು ತಪಸ್ಸಿಗೆ ಕುಳಿತಾಗ ಸೊಳ್ಳೆಗಳ ಕಾಟ ಹೆಚ್ಚಾಗಿತ್ತೆಂದೂ, ಅವುಗಳ ತೊಂದರೆಯನ್ನು ತಡೆಯಲಾಗದೆ ತನ್ನ ಯೋಗಸಾಮರ್ಥ್ಯದಿಂದ ಮೂರು ಸೊಳ್ಳೆಗಳನ್ನು ಕೊಂದುಹಾಕಿದನೆಂದು, ಅದಕ್ಕಾಗಿ ಚಂದ್ರಕಾಂತನು 3 ಗಂಟೆ ಕಾಲ ಶೋಕ ವ್ಯಕ್ತಪಡಿಸಿದನೆಂದು, ಚಂದ್ರಕಾಂತನ ಅಪಾರವಾದ ಶೋಕವನ್ನು ಕಂಡು ದಯಾನಂದನು ತನ್ನ ಪ್ರಾಣಾಯಾಮದ ವಿಶೇಷ ಶಕ್ತಿಯಿಂದ ಅವುಗಳನ್ನು ಬದುಕಿಸಿದನು ಎಂದು ತಿಳಿದು ಬಂದಿದೆ.

ಈ ವಾರ್ತೆಗಳನ್ನು ಅಡುಗೆಮನೆಯಿಂದ ಕೇಳುತ್ತಿದ್ದೀರಿ.

3. ನಿನ್ನೆ ರಾತ್ರಿ ಬೆಂಗಳೂರಿನಿಂದ ಮುಂಬೈಗೆ ಹೊರಟ ಜಂಬೂ ಫ್ಲೈಟ್ ವಿಮಾನವೊಂದು ಆಕಾಶದಲ್ಲಿ ಒಂದು ನಿಮಿಷಕ್ಕೆ ಸಾವಿರ ಕಿಲೋಮೀಟರ್ ವೇಗದಲ್ಲಿ ಹಾರಿಬರುತ್ತಿರುವ ಹದ್ದಿಗೆ ಡಿಕ್ಕಿಹೊಡೆದು ಭಾರೀ ಅಪಘಾತ ಸಂಭವಿಸಿತು. ವಿಮಾನವು ಪುಡಿಪುಡಿಯಾಗಿ ಹೋಗಿದೆ ಎಂದೂ, ಆದರೆ ಹದ್ದಿಗೆ ಯಾವ ಅಪಾಯವಿಲ್ಲದೆ ಸುರಕ್ಷಿತವಾಗಿದೆ ಎಂದು ತಿಳಿದುಬಂದಿದೆ. ವಿಮಾನದಲ್ಲಿ ಪ್ರಯಾಣ ಮಾಡುತ್ತಿದ್ದ 500 ಪ್ರಯಾಣಿಕರಲ್ಲಿ 333 ಜನರು ಸ್ಥಳದಲ್ಲಿಯೇ ಮೃತಪಟ್ಟರೆಂದು, ಇನ್ನುಳಿದ 166 ಜನರು ಗಾಯಗೊಂಡಿದ್ದು ಅವರನ್ನು ಸ್ಥಳೀಯ ಮುನಿಸಿಪಲ್ ಆಸ್ಪತ್ರೆಗೆ

ಸೇರಿಸಲಾಗಿದೆ ಎಂದೂ, ಅದೇ ವಿಮಾನದಲ್ಲಿ ಮುಂಬೈಗೆ ಪ್ರಯಾಣ ಮಾಡುತ್ತಿದ್ದ ನಮ್ಮ ವರದಿಗಾರ ದುರಂತದ ವರದಿ ಸಲ್ಲಿಸಿ ಪ್ರಾಣಬಿಟ್ಟರೆಂದು ತಿಳಿದುಬಂದಿದೆ. ಮೃತರ ಕುಟುಂಬಕ್ಕೆ ತಲಾ 10101 ಪೈಸೆಗಳನ್ನು ಸರಕಾರವು ಪರಿಹಾರ ಧನ ಕೊಡುವು ದೆಂದು ತಿಳಿದುಬಂದಿದೆ.

ಅಪಘಾತಕ್ಕೆ ಕಾರಣವಾದ ಭಾರಿವೇಗದಿಂದ ಹಾರಿಬರುತ್ತಿದ್ದ ಹದ್ದಿನ ಪತ್ತೆ ಯಾಗಿಲ್ಲ. ಅದನ್ನು ಪತ್ತೆಹಚ್ಚಲು ವಿಶೇಷ C.I.D.ಗಳನ್ನು ನೇಮಿಸಲಾಗಿದೆ ಎಂದು ಪೋಲೀಸ್ ಖಾತೆಯವರು ತಿಳಿಸಿದ್ದಾರೆ.

4. ಬೆಂಗಳೂರಿನ ಸಂತೋಷನಗರದ ಆನಂದಕುಮಾರನು ಹೆಂಡತಿಯೊಂದಿಗೆ ಜಗಳವಾಡಿ ಮನಸ್ಸಿನ ಶಾಂತಿಯನ್ನು ಕಳೆದುಕೊಂಡನೆಂದೂ, ಶಾಂತಿಯನ್ನು ಪಡೆಯಲು ವೈದ್ಯರೊಬ್ಬರ ಸಲಹೆಯಮೇರೆಗೆ ಫಾಲಿಡಾಲ್ ಮತ್ತು ಟಿಕ್-20 ಮಿಕ್ಚರನ್ನು ಸೇವಿಸಿ ಚಿರಶಾಂತಿಯನ್ನು ಪಡೆಯುತ್ತಿದ್ದಾರೆ ಎಂದು ತಿಳಿದು ಬಂದಿದೆ.

ಈ ವಾರ್ತೆಗಳನ್ನು ಅಡುಗೆಮನೆಯ ಕೇಂದ್ರದಿಂದ ಕೇಳುತ್ತಿದ್ದಿರಿ.

5. ನಿನ್ನೆ ಭಾನುವಾರ ದಿನಾಂಕ 35-15-75 ರಂದು ಬೆಳಿಗ್ಗೆ 35 ಗಂಟೆ 75 ನಿಮಿಷ 95 ಸೆಕೆಂಡಿಗೆ ಸರಿಯಾಗಿ ಅಶಾಂತಿನಗರದ ರಸ್ತೆಯಲ್ಲಿ ಹೋಗುತ್ತಿರುವ ವ್ಯಕ್ತಿಯೊಬ್ಬನು ಬೀಡಿ ಹೊತ್ತಿಸಿಕೊಳ್ಳುವಾಗ ಆಕಸ್ಮಿಕವಾಗಿ ಅವನ ಗಡ್ಡಕ್ಕೆ ಬೆಂಕಿಬಿದ್ದ ಭಯಾನಕ ಘಟನೆಯೊಂದರ ವರದಿಯಾಗಿದೆ. ಅಲ್ಲಿ ಹಾದು ಹೋಗುತ್ತಿರುವ ಪೋಲಿಸನು ತಕ್ಷಣ ಫೈರ್ ಸ್ಟೇಷನ್‌ಗೆ ಫೋನ್ ಮಾಡಿದಾಗ ಕೂಡಲೇ ೫ ಅಗ್ನಿಶಾಮಕ ಮೋಟಾರು ಗಳು ಬಂದು ಬೆಂಕಿಯನ್ನು ತಕ್ಷಣ ಆರಿಸಲಾಯಿತು. ವ್ಯಕ್ತಿ ಅಪಾಯದಿಂದ ಪಾರಾಗಿ ದ್ದಾನೆಂದು, ಗಡ್ಡವೆಲ್ಲ ಸುಟ್ಟುಹೋಗಿ ಮುಖವು ಸ್ವಚ್ಛವಾಗಿದೆ ಎಂದು ವರದಿಯಾಗಿದೆ. ಇದನ್ನು ತಿಳಿದು ಅವನ ಶ್ರೀಮತಿ ಅಗ್ನಿಶಾಮಕ ದಳದವರಿಗೆ ಕೃತಜ್ಞತೆಗಳನ್ನು ಸಲ್ಲಿಸಿದಳು.

ಇಲ್ಲಿಗೆ ನಮ್ಮ ವಾರ್ತಾ ಪ್ರಸಾರ ಕಾರ್ಯಕ್ರಮ ಮುಗಿಯಿತು. ಮುಂದಿನ ವಾರ್ತೆಗಳನ್ನು ಬರುವ ವರ್ಷದ ಶಿವರಾತ್ರಿಯ ಜಾಗರಣೆಯೆಂದು ಕೇಳುವಿರಿ.

* * * *

ಜಗದ್ರಕ್ಷಕನಾದ ಸರ್ವೇಶ್ವರನು ಸರ್ವಪ್ರಾಣಿಗಳ ನಿತ್ಯ ಅವಶ್ಯಕ ವಸ್ತುಗಳನ್ನೂ ಉತ್ಪನ್ನ ಮಾಡಿ ಹಂಚುತ್ತಲೇ ಇರುತ್ತಾನೆ. ಆದರೆ ಮಾನವ ಹತ್ತು ಜನರ ಅನ್ನವನ್ನು ತಾನೊಬ್ಬನೇ ಬಚ್ಚಿಡುತ್ತಿರುವುದರಿಂದ ಲೋಕಕಂಟಕನಾಗುತ್ತಾನೆ.

ಈಶ್ವರನೊಬ್ಬನೇ ನಿತ್ಯ, ಅನಾದಿ, ಅನಂದ ಅವನು ನಮ್ಮನ್ನು ಹುಟ್ಟಿಸಿದ್ದಾನೆ. ಅವನು ಕೆಡುಕು ಮಾಡಲಾರನೆಂದು ನನ್ನ ಭಾವನೆ, ಕೆಡುಕು ಮಾಡಲಾರನೆಂದು ಭಾವಿಸುವುದು ಮೂರ್ಖತನ.

—ಗಾಂಧೀಜಿ.



# ಹರಿಹರ ಕಂಡಂತೆ ಬಸವಣ್ಣ-ಅಕ್ಕಮಹಾದೇವಿ

ಭಾಗ-೨ ಜಗದ್ಗುರು ಮಾತೆ ಮಹಾದೇವಿ.

## ಹರಿಹರನ ಸ್ಥಾವರಲಿಂಗದ ಮೋಹ

ಹರಿಹರನ ಕೃತಿಯಲ್ಲಿ ಕಾಣಬರುವ ಇನ್ನೊಂದು ತಾತ್ತ್ವಿಕ ದೋಷವೆಂದರೆ ಶರಣರಿಂದ ಸ್ಥಾವರಲಿಂಗಾರ್ಚನೆಯನ್ನು ಮಾಡಿಸುವುದು. ಸ್ಥಾವರ ಲಿಂಗಪೂಜಕನಾಗಿ ಕೃತಿನಾಯಕನನ್ನು ನಿಲ್ಲಿಸಿ, ಅವನು ಮೈಮರೆತು ಪೂಜಿಸುವುದನ್ನು ವರ್ಣಿಸಿ ತೃಪ್ತಿ ಪಡುವ ಈ ಕವಿಯು ತನ್ನ ಅಂತರಂಗವನ್ನು ಈ ಮೂಲಕ ತೆರೆದಿಡುತ್ತಿದ್ದಾನೆಂದು ನಾವು ಭಾವಿಸಬಹುದಾದರೂ, ಕವಿಯ ಈ ಚಿತ್ರಣವು ಶರಣರು ಸ್ಥಾವರಲಿಂಗ ವಿರೋಧಿಗಳಲ್ಲ, ಎಂಬ ತಪ್ಪುಕಲ್ಪನೆಯನ್ನು ಓದುಗರಲ್ಲಿ ಮೂಡಿಸದೆ ಇರದು. ಹರಿಹರನು ಸ್ಥಾವರ ಲಿಂಗಾರ್ಚನೆಯನ್ನು ಅದೆಷ್ಟು ಉತ್ಸಾಹದಾಯಕವಾಗಿ ಮಾಡಿಸಲು ಹವಣಿಸಿರುವನೋ ಆ ಉತ್ಸಾಹವನ್ನು ಶರಣಧರ್ಮದ ಜೀವಾಳವಾದ ಇಷ್ಟಲಿಂಗ ಪೂಜೆಯಲ್ಲಿ ತೋರಿಸಲು ಪ್ರಯತ್ನಿಸಿಲ್ಲ. ಬಹುಶಃ ಇಷ್ಟಲಿಂಗ ಪೂಜೆಯ ಮರ್ಮವೇ ಅವನಿಗೆ ಅಷ್ಟಾಗಿ ತಿಳಿದಿರಲಿಕ್ಕಿಲ್ಲ, ಅಥವಾ ತಾನು ಹಂಪೆಯ ವಿರೂಪಾಕ್ಷನ ಪೂಜಾರಿತ್ವ ದಲ್ಲಿದ್ದು, ಅದನ್ನು ಪೂಜಿಸುವಾಗಿನ ಉತ್ಸಾಹವನ್ನೇ ಕೃತಿನಾಯಕನಲ್ಲಿ ಆರೋಪಿಸಿರ ಬಹುದು.

ಶರಣ ಧರ್ಮವು ಅನುಭಾವ ಪ್ರಧಾನ ಧರ್ಮ. ಇದು, ಮಾನವನನ್ನು ಅಂತ ರಂಗದಲ್ಲಿ ದೇವನನ್ನರಸುವಂತೆ ಪ್ರಚೋದಿಸುವುದೇ ವಿನಾ ಗುಡಿಯಲ್ಲಿ ಅಥವಾ ತೀರ್ಥ ಕ್ಷೇತ್ರಗಳಲ್ಲಿ ಅಲ್ಲ. ಆದ್ದರಿಂದ ಸಾಧಕನು ಮಿಂದು ಪ್ರಶಾಂತಚಿತ್ತನಾಗಿ ಪೂಜೆಯ ಮಂದಿರಕ್ಕೆ, ಅಥವಾ ಧ್ಯಾನಮಂದಿರಕ್ಕೆ ಹೋಗುವನೇ ವಿನಾ (ಹೋಗಬೇಕೇ ಹೊರತು) ಅಲಂಕರಿಸಿಕೊಳ್ಳಲು ಶೃಂಗಾರದ ಕೋಣೆಗಲ್ಲ. ಸ್ನಾನಮಾಡಿ, ಕೇಶಾಲಂಕಾರ-ಮುಖಾ ಲಂಕಾರ ಪೂರೈಸಿ ಗುಡಿಗಳಿಗೆ ದೇವರ ದರ್ಶನಕ್ಕೆ ಹೋಗುವ ರಾಜಲಲನೆಯರಂತೆ ಅಕ್ಕಮಹಾದೇವಿಯನ್ನು ಚಿತ್ರಿಸಿರುವುದನ್ನು ನೋಡಿದಾಗ (ಸ್ಥಲ 5ರಲ್ಲಿ) ತುಂಬಕೆಟ್ಟ ಅನ್ನಿಸುತ್ತದೆ. ಗುರುಪಾದ ತೀರ್ಥವನ್ನು ಮಂಗಳ ಮಜ್ಜನವನ್ನಾಗಿ, ವಿಭೂತಿಯನ್ನು ಸುವಾಸಿತ ದ್ರವ್ಯವನ್ನಾಗಿ, ರುದ್ರಾಕ್ಷಿಯನ್ನು ದಿವ್ಯಾಭರಣವನ್ನಾಗಿ ಮಾಡಿಕೊಂಡ ಅಂತರ್ಮುಖಿಯೂ, ಶೃಂಗಾರದಲ್ಲಿ ನಿರಾಸಕ್ತಳು, ಚಿಂತನಶೀಲಳೂ ಆದ ವಿರಾಗಿಣಿ ಅಕ್ಕಮಹಾದೇವಿಯ ಅಂತರಂಗದ ಅಭೀಪ್ಸೆ, ಚಿತ್ತದ ಓಘವನ್ನೇ ಅರಿಯದೆ, ಸರ್ವಾಂಗ ವನ್ನು ಅಲಂಕರಿಸಿಕೊಳ್ಳಲಾಸಕ್ತಳಾದ ವಿಲಾಸಿನಿಯಂತೆ ಅಕ್ಕನನ್ನು ಚಿತ್ರಿಸಲು ಪ್ರಯತ್ನಿ

ಸಿರುವುದು ಎಂತಹ ಆಭಾಸ! ಹರಿಹರನನ್ನೇ ಆಧಾರವಾಗಿರಿಸಿಕೊಂಡು ಅಕ್ಕಮಹಾದೇವಿಯ ಸಂಕ್ಷಿಪ್ತ ಜೀವನವನ್ನು ಪರಿಚಯಿಸಲೆತ್ನಿಸಿದ ಶ್ರೀ ಹಾ. ಮಾ. ನಾಯಕರ ಅಕ್ಕಮಹಾದೇವಿ (ರಾಷ್ಟ್ರೋತ್ಥಾನ ಪ್ರಕಟಣೆ) ಮತ್ತು ಶ್ರೀಮತಿ ಕಮಲಾಹಂಪನಾ ಅವರ 'ಅಕ್ಕಮಹಾದೇವಿ' (ಐ.ಬಿ.ಹೆಚ್. ಪ್ರಕಟಣೆ) ಓದಿದಾಗ ಶರಣ ಧರ್ಮಾನುಯಾಯಿಗಳಿಗೆ ವ್ಯಥೆ ಎನಿಸದಷ್ಟೇ ಅಲ್ಲ, ಭಕ್ತಿ ಪ್ರಧಾನ ಲಿಂಗವಂತ ಸಂಸ್ಕೃತಿಯ ಅವಹೇಳನ ಎಂದು ಪರಿತಾಪ ಪಡದೆ ಇರರು.

ಬಾಲ್ಯದಿಂದಲೂ ಅಕ್ಕಮಹಾದೇವಿಯಲ್ಲಿ ತೋರಿದ ವಿರಕ್ತಿ, ಸರಳತನಗಳನ್ನು ಗಮನಿಸದೆ ಆಕೆ ಸಕಲಾಲಂಕಾರ ಭೂಷಿತೆಯಾಗಿ ಹೊನ್ನಪಾದುಕೆಗಳನ್ನು ಮೆಟ್ಟಿಕೊಂಡು ಪೂಜಾಮಂದಿರ ಹೊಗುವುದನ್ನು ಕಂಡಾಗ ಹರಿಹರನಿಗೆ ಅಕ್ಕನ ವ್ಯಕ್ತಿತ್ವ ಎಳ್ಳಷ್ಟೂ ಗೋಚರಿಸಿರಲಿಕ್ಕಿಲ್ಲ ಎನ್ನಿಸುವುದು. ಪೂಜೆಗೆ ಕುಳಿತಾಗಲೂ ಸಹ ಪರಿಚಾರಿಕೆಯರ ಸಹಾಯದಿಂದ ಪೂಜಾಸಲಕರಣೆಗಳನ್ನು ಪಡೆದು ವೈಭವಯುತವಾಗಿ ಪೂಜಿಸುವಂತೆ ಚಿತ್ರಿಸಿರುವುದನ್ನು ಕಂಡಾಗ ಹರಿಹರನಿಗೆ ಲಿಂಗವಂತ ಧರ್ಮದ ಗಂಧವಾದರೂ ಇತ್ತೋ ಇಲ್ಲವೋ ಎಂದು ಸೋಜಿಗವೆನಿಸುವುದು. ಏಕೆಂದರೆ ಇಷ್ಟಲಿಂಗ ಪೂಜೆಯು ಸದ್ದುಗದ್ದಲದ ನಡುವೆ, ಜಾಗಟೆ ಗಂಟೆಗಳ ಕಿವಿಯನ್ನು ಗಡಚಿಕ್ಕುವ ಸಪ್ಪಳದ ಮಧ್ಯೆ ಮಾಡುವಂತಹುದಲ್ಲ. ಇಂದ್ರಿಯಗಳನ್ನು ಬಹಿರ್ಮುಖವಾಗಿಸುವ ಅಥವಾ ಉದ್ರೇಕಿಸುವ ಯಾವುದೇ ಶಬ್ದ ತರಂಗವಿಲ್ಲದ ಪ್ರಶಾಂತ ಸ್ಥಳದಲ್ಲಿ, ಧ್ಯಾನ ಪ್ರಮುಖವಾಗಿ ಮಾಡುವ ಯೌಗಿಕ ಪೂಜೆಯದು. ಅಂತೆಯೇ ಶರಣರು ನೀರವತೆಯನ್ನು ಬಯಸಿ ಭೂತಳದಲ್ಲಿ ಪುಟ್ಟಪುಟ್ಟಗವಿಗಳನ್ನು ಆರಿಸಿಕೊಂಡರು. ಇದನ್ನರಿಯದ ಹರಿಹರನು ರಾಜ ಪೂಜೆಯೋಪಾದಿಯಲ್ಲಿ ಅಕ್ಕನ ಪೂಜೆಯನ್ನು ಚಿತ್ರಿಸಿ ಆಕೆಯ ವ್ಯಕ್ತಿತ್ವ–ಅಂತರ್ಮುಖತ್ವಕ್ಕೆ ಭಂಗ ತಂದಿದ್ದಾನೆ.

ಸಾಧಕ ಜೀವನದ ಮರ್ಮ, ಮುಮುಕ್ಷುಗಳ ಮನಸ್ಥಿತಿಯನ್ನು ಅರಿಯದ ಬಹುಪಾಲು ಸಾಹಿತಿಗಳು ಇಂತಹ ಹರಿಹರನನ್ನೇ ಆಧಾರವಾಗಿರಿಸಿಕೊಂಡು ಶರಣರ ಬದುಕನ್ನು ವಿಕೃತ ರೇಖೆಗಳಲ್ಲಿ ಚಿತ್ರಿಸಿಬಿಟ್ಟಿದ್ದಾರೆ. ಹರಿಹರನು ಪೂಜಾರಿಗಳಲ್ಲಿ ಉತ್ತಮನು, ಪ್ರಾಮಾಣಿಕನು, ಆದರೆ ಸಂವೇದನಾತ್ಮಕ ಸಾಧಕ (aspirant)ನಲ್ಲ. ಶರಣರಾದರೋ ಪೂಜಾರಿತ್ವದ ಮನೋಭಾವಕ್ಕಿಂತ ಪ್ರವಾದಿತ್ವಕ್ಕೇ ಹೆಚ್ಚಿನ ಸ್ಥಾನ ಕೊಟ್ಟ, ಚಿಂತನಶೀಲ ಸಾಧಕ ಹೃದಯಿಗಳು. ಹರಿಹರನು ಕಟ್ಟುನಿಟ್ಟಿನ ಶಿವಭಕ್ತನಾದರೆ ಶರಣರು ವೈಚಾರಿಕ 'ದೇವಭಕ್ತ'ರು. ಅವನದು ಹರಿಯನ್ನು ಅಲ್ಲಗಳೆದು, ಹರಿಯ ಗುಡಿಯೊಳಕ್ಕೆ ಪಾದವಿಡದ ಏಕನಿಷ್ಠೆಯ ಶಿವಭಕ್ತನಾಗುವ ಪ್ರಯತ್ನವಾದರೆ ಶರಣರು ಬ್ರಹ್ಮ–ಹರಿ–ಹರರೆಲ್ಲರನ್ನೂ ಅಲ್ಲಗಳೆದು, ಗುಡಿಯ ನಿರ್ಮಾಣವನ್ನೇ ವಿಡಂಬಿಸಿ, ನಿರಾಕಾರ ನಿರ್ಗುಣ ದೇವನ ಆರಾಧಕರಾಗುವ ಪ್ರಯತ್ನ.

ಇಲ್ಲಿ ಒಂದು ಸಂಶಯವನ್ನು ಓದುಗರು ಎತ್ತಬಹುದು.



# ಒಂದು ನಗೆಬರಹ

—ಗುರುಪಾದ ಸೂರಗೊಂಡ.

**ಆಕಾಶವಾಣಿ** ನೆಲಮಂಗಲ, ನಾಗಮಂಗಲ, ಜಾಲಹಳ್ಳಿ ಮತ್ತು ಶಿವನಳ್ಳಿ.

ಈಗ ವೇಳೆ 33 ಗಂಟೆ 66 ನಿಮಿಷ 99 ಸೆಕಂಡುಗಳಾಗಲಿವೆ.

ಇನ್ನು ಕೆಲವೇ ಗಂಟೆಗಳಲ್ಲಿ ನಮ್ಮ ಮುಂದಿನ ಕಾರ್ಯಕ್ರಮ ಪ್ರಾರಂಭವಾಗಲಿದೆ.

ಇದು ಅಡುಗೆಮನೆ ಕೇಂದ್ರದ ಸಹಪ್ರಸಾರ,

ತರಂಗಾಂತರ 00000

ಶಿವರಾತ್ರಿಯ ವಿಶೇಷ ವಾರ್ತೆಗಳು.

ಓದುತ್ತಿರುವವರು ಶ್ರೀಮತಿ S. ಗುರುಪಾದ.

**ಮುಖ್ಯಾಂಶಗಳು :**

1. ಮೊನ್ನೆ ನಡೆದ ವಿಧಾನ ಸಭಾ ಚುನಾವಣೆಯಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಪಕ್ಷ (R)ವು ಎರಡು ಸ್ಥಾನಗಳನ್ನು ಪಡೆದು ಪ್ರಚಂಡ ಬಹುಮತಗಳಿಸಿತು. ಇನ್ನು ಕೆಲವೇ ವರ್ಷಗಳಲ್ಲಿ ಆ ಪಕ್ಷವು ತನ್ನ ನಾಯಕನನ್ನು ಆಯ್ಕೆಮಾಡಿ ಮಂತ್ರಿ ಮಂಡಳವನ್ನು ರಚಿಸುವದೆಂದು ವರದಿಯಾಗಿದೆ.

2. ಇಂದು ಬೆಳಗ್ಗೆ ಪ್ರಕಾಶನು ತಪಸ್ಸಿಗೆ ಕುಳಿತಾಗ ಸೊಳ್ಳೆಗಳ ಕಾಟ ಹೆಚ್ಚಾಗಿತ್ತೆಂದೂ, ಅವುಗಳ ತೊಂದರೆಯನ್ನು ತಡೆಯಲಾಗದೆ ತನ್ನ ಯೋಗಸಾಮರ್ಥ್ಯದಿಂದ ಮೂರು ಸೊಳ್ಳೆಗಳನ್ನು ಕೊಂದುಹಾಕಿದನೆಂದು, ಅದಕ್ಕಾಗಿ ಚಂದ್ರಕಾಂತನು 3 ಗಂಟೆ ಕಾಲ ಶೋಕ ವ್ಯಕ್ತಪಡಿಸಿದನೆಂದು, ಚಂದ್ರಕಾಂತನ ಅಪಾರವಾದ ಶೋಕವನ್ನು ಕಂಡು ದಯಾನಂದನು ತನ್ನ ಪ್ರಾಣಾಯಾಮದ ವಿಶೇಷ ಶಕ್ತಿಯಿಂದ ಅವುಗಳನ್ನು ಬದುಕಿಸಿದನು ಎಂದು ತಿಳಿದು ಬಂದಿದೆ.

ಈ ವಾರ್ತೆಗಳನ್ನು ಅಡುಗೆಮನೆಯಿಂದ ಕೇಳುತ್ತಿದ್ದೀರಿ.

3. ನಿನ್ನೆ ರಾತ್ರಿ ಬೆಂಗಳೂರಿನಿಂದ ಮುಂಬೈಗೆ ಹೊರಟ ಜಂಬೂ ಫ್ಲೈಟ್ ವಿಮಾನವೊಂದು ಆಕಾಶದಲ್ಲಿ ಒಂದು ನಿಮಿಷಕ್ಕೆ ಸಾವಿರ ಕಿಲೋಮೀಟರ್ ವೇಗದಲ್ಲಿ ಹಾರಿಬರುತ್ತಿರುವ ಹದ್ದಿಗೆ ಡಿಕ್ಕಿಹೊಡೆದು ಭಾರೀ ಅಪಘಾತ ಸಂಭವಿಸಿತು. ವಿಮಾನವು ಪುಡಿಪುಡಿಯಾಗಿ ಹೋಗಿದೆ ಎಂದೂ, ಆದರೆ ಹದ್ದಿಗೆ ಯಾವ ಅಪಾಯವಿಲ್ಲದೆ ಸುರಕ್ಷಿತವಾಗಿದೆ ಎಂದು ತಿಳಿದುಬಂದಿದೆ. ವಿಮಾನದಲ್ಲಿ ಪ್ರಯಾಣ ಮಾಡುತ್ತಿದ್ದ 500 ಪ್ರಯಾಣಿಕರಲ್ಲಿ 333 ಜನರು ಸ್ಥಳದಲ್ಲಿಯೇ ಮೃತಪಟ್ಟರೆಂದು, ಇನ್ನುಳಿದ 166 ಜನರು ಗಾಯಗೊಂಡಿದ್ದು ಅವರನ್ನು ಸ್ಥಳೀಯ ಮುನಿಸಿಪಲ್ ಆಸ್ಪತ್ರೆಗೆ

ಸೇರಿಸಲಾಗಿದೆ ಎಂದೂ, ಅದೇ ವಿಮಾನದಲ್ಲಿ ಮುಂಬೈಗೆ ಪ್ರಯಾಣ ಮಾಡುತ್ತಿದ್ದ ನಮ್ಮ ವರದಿಗಾರ ದುರಂತದ ವರದಿ ಸಲ್ಲಿಸಿ ಪ್ರಾಣಬಿಟ್ಟರೆಂದು ತಿಳಿದುಬಂದಿದೆ. ಮೃತರ ಕುಟುಂಬಕ್ಕೆ ತಲಾ 10101 ಪೈಸೆಗಳನ್ನು ಸರಕಾರವು ಪರಿಹಾರ ಧನ ಕೊಡುವುದೆಂದು ತಿಳಿದುಬಂದಿದೆ.

ಅಪಘಾತಕ್ಕೆ ಕಾರಣವಾದ ಭಾರಿವೇಗದಿಂದ ಹಾರಿಬರುತ್ತಿದ್ದ ಹದ್ದಿನ ಪತ್ತೆಯಾಗಿಲ್ಲ. ಅದನ್ನು ಪತ್ತೆಹಚ್ಚಲು ವಿಶೇಷ C.I.D.ಗಳನ್ನು ನೇಮಿಸಲಾಗಿದೆ ಎಂದು ಪೋಲೀಸ್ ಖಾತೆಯವರು ತಿಳಿಸಿದ್ದಾರೆ.

4. ಬೆಂಗಳೂರಿನ ಸಂತೋಷನಗರದ ಆನಂದಕುಮಾರನು ಹೆಂಡತಿಯೊಂದಿಗೆ ಜಗಳವಾಡಿ ಮನಸ್ಸಿನ ಶಾಂತಿಯನ್ನು ಕಳೆದುಕೊಂಡನೆಂದೂ, ಶಾಂತಿಯನ್ನು ಪಡೆಯಲು ವೈದ್ಯರೊಬ್ಬರ ಸಲಹೆಯಮೇರೆಗೆ ಫಾಲಿಡಾಲ್ ಮತ್ತು ಟಿಕ್-20 ಮಿಕ್ಸ್ಚರನ್ನು ಸೇವಿಸಿ ಚಿರಶಾಂತಿಯನ್ನು ಪಡೆಯುತ್ತಿದ್ದಾರೆ ಎಂದು ತಿಳಿದು ಬಂದಿದೆ.

ಈ ವಾರ್ತೆಗಳನ್ನು ಅಡುಗೆಮನೆಯ ಕೇಂದ್ರದಿಂದ ಕೇಳುತ್ತಿದ್ದಿರಿ.

5. ನಿನ್ನೆ ಭಾನುವಾರ ದಿನಾಂಕ 35-15-75 ರಂದು ಬೆಳಿಗ್ಗೆ 35 ಗಂಟೆ 75 ನಿಮಿಷ 95 ಸೆಕೆಂಡಿಗೆ ಸರಿಯಾಗಿ ಅಶಾಂತಿನಗರದ ರಸ್ತೆಯಲ್ಲಿ ಹೋಗುತ್ತಿರುವ ವ್ಯಕ್ತಿಯೊಬ್ಬನು ಬೀಡಿ ಹೊತ್ತಿಸಿಕೊಳ್ಳುವಾಗ ಆಕಸ್ಮಿಕವಾಗಿ ಅವನ ಗಡ್ಡಕ್ಕೆ ಬೆಂಕಿಬಿದ್ದ ಭಯಾನಕ ಘಟನೆಯೊಂದರ ವರದಿಯಾಗಿದೆ. ಅಲ್ಲಿ ಹಾದು ಹೋಗುತ್ತಿರುವ ಪೋಲಿಸನು ತಕ್ಷಣ ಫೈರ್ ಸ್ಟೇಷನ್‌ಗೆ ಫೋನ್ ಮಾಡಿದಾಗ ಕೂಡಲೇ ೫ ಅಗ್ನಿಶಾಮಕ ಮೋಟಾರುಗಳು ಬಂದು ಬೆಂಕಿಯನ್ನು ತಕ್ಷಣ ಆರಿಸಲಾಯಿತು. ವ್ಯಕ್ತಿ ಅಪಾಯದಿಂದ ಪಾರಾಗಿದ್ದಾನೆಂದು, ಗಡ್ಡವೆಲ್ಲ ಸುಟ್ಟುಹೋಗಿ ಮುಖವು ಸ್ವಚ್ಛವಾಗಿದೆ ಎಂದು ವರದಿಯಾಗಿದೆ. ಇದನ್ನು ತಿಳಿದು ಅವನ ಶ್ರೀಮತಿ ಅಗ್ನಿಶಾಮಕ ದಳದವರಿಗೆ ಕೃತಜ್ಞತೆಗಳನ್ನು ಸಲ್ಲಿಸಿದಳು.

ಇಲ್ಲಿಗೆ ನಮ್ಮ ವಾರ್ತಾ ಪ್ರಸಾರ ಕಾರ್ಯಕ್ರಮ ಮುಗಿಯಿತು. ಮುಂದಿನ ವಾರ್ತೆಗಳನ್ನು ಬರುವ ವರ್ಷದ ಶಿವರಾತ್ರಿಯ ಜಾಗರಣೆಯೊಂದು ಕೇಳುವಿರಿ.

* * * *

ಜಗದ್ರಕ್ಷಕನಾದ ಸರ್ವೇಶ್ವರನು ಸರ್ವಪ್ರಾಣಿಗಳ ನಿತ್ಯ ಅವಶ್ಯಕ ವಸ್ತುಗಳನ್ನೂ ಉತ್ಪನ್ನ ಮಾಡಿ ಹಂಚುತ್ತಲೇ ಇರುತ್ತಾನೆ. ಆದರೆ ಮಾನವ ಹತ್ತು ಜನರ ಅನ್ನವನ್ನು ತಾನೊಬ್ಬನೇ ಬಚ್ಚಿಡುತ್ತಿರುವುದರಿಂದ ಲೋಕಕಂಟಕನಾಗುತ್ತಾನೆ.

ಈಶ್ವರನೊಬ್ಬನೇ ನಿತ್ಯ, ಅನಾದಿ, ಅನಂದ ಅವನು ನಮ್ಮನ್ನು ಹುಟ್ಟಿಸಿದ್ದಾನೆ. ಅವನು ಕೆಡುಕು ಮಾಡಲಾರನೆಂದು ನನ್ನ ಭಾವನೆ, ಕೆಡುಕು ಮಾಡಲಾರನೆಂದು ಭಾವಿಸುವುದು ಮೂರ್ಖತನ.

—ಗಾಂಧೀಜಿ.



# ಹರಿಹರ ಕಂಡಂತೆ ಬಸವಣ್ಣ-ಅಕ್ಕಮಹಾದೇವಿ

**ಭಾಗ-೨** **ಜಗದ್ಗುರು ಮಾತೆ ಮಹಾದೇವಿ.**

## ಹರಿಹರನ ಸ್ಥಾವರಲಿಂಗದ ಮೋಹ

ಹರಿಹರನ ಕೃತಿಯಲ್ಲಿ ಕಾಣಬರುವ ಇನ್ನೊಂದು ತಾತ್ತ್ವಿಕ ದೋಷವೆಂದರೆ ಶರಣರಿಂದ ಸ್ಥಾವರಲಿಂಗಾರ್ಚನೆಯನ್ನು ಮಾಡಿಸುವುದು. ಸ್ಥಾವರ ಲಿಂಗಪೂಜಕನಾಗಿ ಕೃತಿನಾಯಕನನ್ನು ನಿಲ್ಲಿಸಿ, ಅವನು ಮೈಮರೆತು ಪೂಜಿಸುವುದನ್ನು ವರ್ಣಿಸಿ ತೃಪ್ತಿಪಡುವ ಈ ಕವಿಯು ತನ್ನ ಅಂತರಂಗವನ್ನು ಈ ಮೂಲಕ ತೆರೆದಿಡುತ್ತಿದ್ದಾನೆಂದು ನಾವು ಭಾವಿಸಬಹುದಾದರೂ, ಕವಿಯ ಈ ಚಿತ್ರಣವು ಶರಣರು ಸ್ಥಾವರಲಿಂಗ ವಿರೋಧಿಗಳಲ್ಲ, ಎಂಬ ತಪ್ಪುಕಲ್ಪನೆಯನ್ನು ಓದುಗರಲ್ಲಿ ಮೂಡಿಸದೆ ಇರದು. ಹರಿಹರನು ಸ್ಥಾವರ ಲಿಂಗಾರ್ಚನೆಯನ್ನು ಅದೆಷ್ಟು ಉತ್ಸಾಹದಾಯಕವಾಗಿ ಮಾಡಿಸಲು ಹವಣಿಸಿರುವನೋ ಆ ಉತ್ಸಾಹವನ್ನು ಶರಣಧರ್ಮದ ಜೀವಾಳವಾದ ಇಷ್ಟಲಿಂಗ ಪೂಜೆಯಲ್ಲಿ ತೋರಿಸಲು ಪ್ರಯತ್ನಿಸಿಲ್ಲ. ಬಹುಶಃ ಇಷ್ಟಲಿಂಗ ಪೂಜೆಯ ಮರ್ಮವೇ ಅವನಿಗೆ ಅಷ್ಟಾಗಿ ತಿಳಿದಿರಲಿಕ್ಕಿಲ್ಲ, ಅಥವಾ ತಾನು ಹಂಪೆಯ ವಿರೂಪಾಕ್ಷನ ಪೂಜಾರಿತ್ವದಲ್ಲಿದ್ದು, ಆದನ್ನು ಪೂಜಿಸುವಾಗಿನ ಉತ್ಸಾಹವನ್ನೇ ಕೃತಿನಾಯಕನಲ್ಲಿ ಆರೋಪಿಸಿರಬಹುದು.

ಶರಣ ಧರ್ಮವು ಅನುಭಾವ ಪ್ರಧಾನ ಧರ್ಮ. ಇದು, ಮಾನವನನ್ನು ಅಂತರಂಗದಲ್ಲಿ ದೇವನನ್ನರಸುವಂತೆ ಪ್ರಚೋದಿಸುವುದೇ ವಿನಾ ಗುಡಿಯಲ್ಲಿ ಅಥವಾ ತೀರ್ಥ ಕ್ಷೇತ್ರಗಳಲ್ಲಿ ಅಲ್ಲ. ಆದ್ದರಿಂದ ಸಾಧಕನು ಮಿಂದು ಪ್ರಶಾಂತಚಿತ್ತನಾಗಿ ಪೂಜೆಯ ಮಂದಿರಕ್ಕೆ, ಅಥವಾ ಧ್ಯಾನಮಂದಿರಕ್ಕೆ ಹೋಗುವನೇ ವಿನಾ (ಹೋಗಬೇಕೇ ಹೊರತು) ಅಲಂಕರಿಸಿಕೊಳ್ಳಲು ಶೃಂಗಾರದ ಕೋಣೆಗಲ್ಲ. ಸ್ನಾನಮಾಡಿ, ಕೇಶಾಲಂಕಾರ-ಮುಖಾಲಂಕಾರ ಪೂರೈಸಿ ಗುಡಿಗಳಿಗೆ ದೇವರ ದರ್ಶನಕ್ಕೆ ಹೋಗುವ ರಾಜಲಲನೆಯರಂತೆ ಅಕ್ಕಮಹಾದೇವಿಯನ್ನು ಚಿತ್ರಿಸಿರುವುದನ್ನು ನೋಡಿದಾಗ (ಸ್ಥಲ 5ರಲ್ಲಿ) ತುಂಬಕೆಟ್ಟ ಅನ್ನಿಸುತ್ತದೆ. ಗುರುಪಾದ ತೀರ್ಥವನ್ನು ಮಂಗಳ ಮಜ್ಜನವನ್ನಾಗಿ, ವಿಭೂತಿಯನ್ನು ಸುವಾಸಿತ ದ್ರವ್ಯವನ್ನಾಗಿ, ರುದ್ರಾಕ್ಷಿಯನ್ನು ದಿವ್ಯಾಭರಣವನ್ನಾಗಿ ಮಾಡಿಕೊಂಡ ಅಂತರ್ಮುಖಿಯೂ, ಶೃಂಗಾರದಲ್ಲಿ ನಿರಾಸಕ್ತಳೂ, ಚಿಂತನಶೀಲಳೂ ಆದ ವಿರಾಗಿಣಿ ಅಕ್ಕಮಹಾದೇವಿಯ ಅಂತರಂಗದ ಅಭೀಪ್ಸೆ, ಚಿತ್ತದ ಓಘವನ್ನೇ ಅರಿಯದೆ, ಸರ್ವಾಂಗವನ್ನು ಅಲಂಕರಿಸಿಕೊಳ್ಳಲಾಸಕ್ತಳಾದ ವಿಲಾಸಿನಿಯಂತೆ ಅಕ್ಕನನ್ನು ಚಿತ್ರಿಸಲು ಪ್ರಯತ್ನಿ

ಸಿರುವುದು ಎಂತಹ ಆಭಾಸ! ಹರಿಹರನನ್ನೇ ಆಧಾರವಾಗಿರಿಸಿಕೊಂಡು ಅಕ್ಕಮಹಾದೇವಿಯ ಸಂಕ್ಷಿಪ್ತ ಜೀವನವನ್ನು ಪರಿಚಯಿಸಲೆತ್ನಿಸಿದ ಶ್ರೀ ಹಾ. ಮಾ. ನಾಯಕರ ಅಕ್ಕಮಹಾದೇವಿ (ರಾಷ್ಟ್ರೋತ್ಥಾನ ಪ್ರಕಟಣೆ) ಮತ್ತು ಶ್ರೀಮತಿ ಕಮಲಾಹಂಪನಾ ಅವರ 'ಅಕ್ಕಮಹಾದೇವಿ' (ಐ.ಬಿ.ಹೆಚ್. ಪ್ರಕಟಣೆ) ಓದಿದಾಗ ಶರಣ ಧರ್ಮಾನುಯಾಯಿಗಳಿಗೆ ವ್ಯಥೆ ಎನಿಸದಷ್ಟೇ ಅಲ್ಲ, ಭಕ್ತಿ ಪ್ರಧಾನ ಲಿಂಗವಂತ ಸಂಸ್ಕೃತಿಯ ಅವಹೇಳನ ಎಂದು ಪರಿತಾಪ ಪಡದೆ ಇರರು.

ಬಾಲ್ಯದಿಂದಲೂ ಅಕ್ಕಮಹಾದೇವಿಯಲ್ಲಿ ತೋರಿದ ವಿರಕ್ತಿ, ಸರಳತನಗಳನ್ನು ಗಮನಿಸದೆ ಆಕೆ ಸಕಲಾಲಂಕಾರ ಭೂಷಿತೆಯಾಗಿ ಹೊನ್ನಪಾದುಕೆಗಳನ್ನು ಮೆಟ್ಟಿಕೊಂಡು ಪೂಜಾಮಂದಿರ ಹೊಗುವುದನ್ನು ಕಂಡಾಗ ಹರಿಹರನಿಗೆ ಅಕ್ಕನ ವ್ಯಕ್ತಿತ್ವ ಎಳ್ಳಷ್ಟೂ ಗೋಚರಿಸಿರಲಿಕ್ಕಿಲ್ಲ ಎನ್ನಿಸುವುದು. ಪೂಜೆಗೆ ಕುಳಿತಾಗಲೂ ಸಹ ಪರಿಚಾರಿಕೆಯರ ಸಹಾಯದಿಂದ ಪೂಜಾಸಲಕರಣೆಗಳನ್ನು ಪಡೆದು ವೈಭವಯುತವಾಗಿ ಪೂಜಿಸುವಂತೆ ಚಿತ್ರಿಸಿರುವುದನ್ನು ಕಂಡಾಗ ಹರಿಹರನಿಗೆ ಲಿಂಗವಂತ ಧರ್ಮದ ಗಂಧವಾದರೂ ಇತ್ತೋ ಇಲ್ಲವೋ ಎಂದು ಸೋಜಿಗವೆನಿಸುವುದು. ಏಕೆಂದರೆ ಇಷ್ಟಲಿಂಗ ಪೂಜೆಯು ಸದ್ದುಗದ್ದಲದ ನಡುವೆ, ಜಾಗಟೆ ಗಂಟೆಗಳ ಕಿವಿಯನ್ನು ಗಡಚಿಕ್ಕುವ ಸಪ್ಪಳದ ಮಧ್ಯೆ ಮಾಡುವಂತಹುದಲ್ಲ. ಇಂದ್ರಿಯಗಳನ್ನು ಬಹಿರ್ಮುಖವಾಗಿಸುವ ಅಥವಾ ಉದ್ರೇಕಿಸುವ ಯಾವುದೇ ಶಬ್ದ ತರಂಗವಿಲ್ಲದ ಪ್ರಶಾಂತ ಸ್ಥಳದಲ್ಲಿ, ಧ್ಯಾನ ಪ್ರಮುಖವಾಗಿ ಮಾಡುವ ಯೌಗಿಕ ಪೂಜೆಯದು. ಅಂತೆಯೇ ಶರಣರು ನೀರವತೆಯನ್ನು ಬಯಸಿ ಭೂತಳದಲ್ಲಿ ಪುಟ್ಟಪುಟ್ಟ ಗವಿಗಳನ್ನು ಆರಿಸಿಕೊಂಡರು. ಇದನ್ನರಿಯದ ಹರಿಹರನು ರಾಜ ಪೂಜೆಯೋಪಾದಿಯಲ್ಲಿ ಅಕ್ಕನ ಪೂಜೆಯನ್ನು ಚಿತ್ರಿಸಿ ಆಕೆಯ ವ್ಯಕ್ತಿತ್ವ–ಅಂತರ್ಮುಖತ್ವಕ್ಕೆ ಭಂಗ ತಂದಿದ್ದಾನೆ.

ಸಾಧಕ ಜೀವನದ ಮರ್ಮ, ಮುಮುಕ್ಷುಗಳ ಮನಸ್ಥಿತಿಯನ್ನು ಅರಿಯದ ಬಹುಪಾಲು ಸಾಹಿತಿಗಳು ಇಂತಹ ಹರಿಹರನನ್ನೇ ಆಧಾರವಾಗಿರಿಸಿಕೊಂಡು ಶರಣರ ಬದುಕನ್ನು ವಿಕೃತ ರೇಖೆಗಳಲ್ಲಿ ಚಿತ್ರಿಸಿಬಿಟ್ಟಿದ್ದಾರೆ. ಹರಿಹರನು ಪೂಜಾರಿಗಳಲ್ಲಿ ಉತ್ತಮನು, ಪ್ರಾಮಾಣಿಕನು, ಆದರೆ ಸಂವೇದನಾತ್ಮಕ ಸಾಧಕ (aspirant)ನಲ್ಲ. ಕೊಟ್ಟ, ಚಿಂತನಶೀಲ ಸಾಧಕ ಹೃದಯಿಗಳು. ಹರಿಹರನು ಕಟ್ಟುನಿಟ್ಟಿನ ಶಿವಭಕ್ತನಾದರೆ ಶರಣರು ವೈಚಾರಿಕ 'ದೇವಭಕ್ತ'ರು. ಅವನದು ಹರಿಯನ್ನು ಅಲ್ಲಗಳೆದು, ಹರಿಯೆ ಗುಡಿಯೊಳಕ್ಕೆ ಪಾದವಿಡದ ಏಕನಿಷ್ಠೆಯ ಶಿವಭಕ್ತನಾಗುವ ಪ್ರಯತ್ನವಾದರೆ ಶರಣರು ಬ್ರಹ್ಮ–ಹರಿ–ಹರರೆಲ್ಲರನ್ನೂ ಅಲ್ಲಗಳೆದು, ಗುಡಿಯ ನಿರ್ಮಾಣವನ್ನೇ ವಿಡಂಬಿಸಿ, ನಿರಾಕಾರ ನಿರ್ಗುಣ ದೇವನ ಆರಾಧಕರಾಗುವ ಪ್ರಯತ್ನ.

ಇಲ್ಲಿ ಒಂದು ಸಂಶಯವನ್ನು ಓದುಗರು ಎತ್ತಬಹುದು.



"ವಿಷವಟ್ಟಿಸುಡುವಲ್ಲಿ, ವೀರಭದ್ರ ಕೊಲುವಲ್ಲಿ ಕೂಡಲ ಸಂಗಯ್ಯಂಗೆ ಶರಣೆಂದು ಮೊರೆಯಿಟ್ಟರೆಲ್ಲರು. (ಬ.ಷ.ವ. ೫೪೪), ಕೂಡಲ ಸಂಗಮ ದೇವನು ದಕ್ಷಯಜ್ಞವ ಕೆಡಿಸಿದುದು ಮರೆದಿರಲ್ಲಾ (ಬ.ಷ.ವ. ೫೪೭), ಮುಂತಾದ ವಚನಗಳಲ್ಲಿ ಬಸವಣ್ಣನವರ ಆದಿಯಾಗಿ ಇತರ ಶರಣರು ಸಹ ಪೌರಾಣಿಕ ಶಿವನನ್ನು ಎತ್ತಿಹಿಡಿದು ಹರಿಯನ್ನು ಅಲ್ಲಗಳೆದಿರುವರು. ಆದ್ದರಿಂದ ಶರಣರು ಶಿವನ (ಪೌರಾಣಿಕ) ಆರಾಧಕರಲ್ಲವೆ?" ಈ ಸಂದೇಹಕ್ಕೆ ಹೀಗೆ ಉತ್ತರವನ್ನು ನೀಡಬಹುದು. ಬಸವಣ್ಣನಾದಿಯಾಗಿ ಉಳಿದೆಲ್ಲ ಶರಣರು ಪೂರ್ವಾಶ್ರಮದಲ್ಲಿ, ಪೂರ್ವಸಂಸ್ಕಾರದಲ್ಲಿ ಶೈವಮಾರ್ಗೀಯರು, ಶಿವನ ಮತ್ತು ಶೈವಾಲಯಗಳ ನಂಟು ಪರಂಪರಾಗತವಾಗಿ ಅವರಿಗೆ ಬಂದುದು. ಆದರೆ ಬಸವಣ್ಣನ ಬದುಕಿನಲ್ಲಿಯೇ ಒಂದು ಬಗೆಯ ಮಾನಸಾಂತರ (Conversion) ವಾಯಿತು. ಆ ಮಾನಸಾಂತರ ಬಹುದೇವೋಪಾಸನೆ (Polytheism) ಯಿಂದ ಏಕದೇವೋಪಾಸನೆ (Monotheism) ಯತ್ತ. ಅದನ್ನು ಹರಿಹರನೇ ಒಂದು ಪ್ರಸಂಗದ ಮೂಲಕ ಚಿತ್ರಿಸಿದ್ದಾನೆ. ಕೂಡಲ ಸಂಗಮನನ್ನು ಬಸವಣ್ಣನು ಬಿಡುವಾಗ, ಬಿಡಲಾರದ ಮನೋವ್ಯಥೆಯಿಂದ ತೊಳಲುವಾಗ ಅವನಿಗೆ ಸಿಕ್ಕುವ (ಸಂಗಮನಾಥನಿಂದ ಅಂದರೆ ತನ್ನಂತರಂಗದಿಂದ) ಆಶ್ವಾಸನೆ ಹೀಗಿದೆ: "ನೆನೆಯೆ ಮುಂದಿರ್ದಪೆಂ ಕರೆದೊಡೋ ಎಂದಪೆಂ ಮನದೊಳಗೆ ಕರದೊಳಗೆ ತನುವಿನೊಳಗಿರ್ದಪೆಂ ನಿಂದಲ್ಲಿನಿಂದಪೆಂ ನಡೆದಲ್ಲಿ ನಡೆದಪೆಂ ಬಂದಲ್ಲಿ ಬಂದಪೆಂ ನುಡಿದಲ್ಲಿ ನುಡಿದಪೆಂ." ಈ ಶಬ್ದಗಳು–ಉಕ್ತಿಗಳು ಬಸವಣ್ಣನ ತಾತ್ವಿಕ ಪರಿವರ್ತನೆಯನ್ನು ಚಿತ್ರಿಸುತ್ತವೆ. "ದೇವಾಲಯದ ಗರ್ಭಗುಡಿಯೊಳಗೆ ಕುಳಿತವನೇ ಸಂಗಮನು ದೇವನು" ಎಂಬ ಭಾವ ತೊಲಗಿ, "ದೇವನು ಸರ್ವವ್ಯಾಪಕ, ಜಗತ್ತೇ ಅವನ ಮನೆ, ಅವನು ಸದಾ ಸನ್ನಿಹಿತನು" ಎಂಬ ಭಾವನೆಗಳು ಅಳವಡುತ್ತವೆ. ಆದ್ದರಿಂದ ಈ ಮಾನಸಾಂತರದ ಪೂರ್ವದಲ್ಲಿನ ವಚನಗಳು ಆ ಶೈವಪರ ಸೊಲ್ಲುಗಳು ಕಾಣಿಸಿಕೊಳ್ಳುವುದು ಸಹಜವೇ. ಅವುಗಳನ್ನು ಬಸವಣ್ಣನು ಅಂತಿಮ (final)ವಾಗಿ ಕೊಟ್ಟ ತತ್ವದ ರೂಪುರೇಷೆ ಹಿಡಿದು ವಿಭಜಿಸಿ, ವ್ಯಾಖ್ಯಾನಿಸುವುದು ಅವಶ್ಯಕವು. ಜೀವನಾನುಭವ, ತನ್ನವೇ ಆದ ನಿರ್ದಿಷ್ಟ ತಾತ್ತ್ವಿಕ ನಿರ್ಧಾರ (Conviction) ಗಳಿಲ್ಲದಾಗ ಬರೆದ ವಚನಗಳನ್ನು ಪರಿಪಕ್ವವಾದ ಐಕ್ಯಸ್ಥಿತಿಯಲ್ಲಿ ಹೊಂದಿಸಿ, ಓದಿ, ತಪ್ಪುನಿರ್ಧಾರಕ್ಕೆ ಬರುವುದು ಉಚಿತವೆ?

ಐತಿಹಾಸಿಕ ಘಟನೆಗಳನ್ನು ಖಚಿತಪಡಿಸಿಕೊಳ್ಳದೆ ಭಾವುಕನಾಗಿ ಬರೆಯುವುದು ಹರಿಹರನ ಒಂದು ಸ್ವಾಭಾವಿಕ ಪ್ರವೃತ್ತಿ. ಅಂತೆಯೇ ಅಕ್ಕಮಹಾದೇವಿಯ ಬದುಕಿನಲ್ಲಿ ಮಹತ್ವಪೂರ್ಣ ಘಟನೆಯಾದ ಕಲ್ಯಾಣ ಸಂದರ್ಶನದ ಬಗ್ಗೆ ಏನೊಂದು ಮಾತನ್ನೂ ಆಡಿಲ್ಲ, ಸಾಧಕ ಜೀವನದ ಅಪರಿಪೂರ್ಣತೆಯನ್ನು ತುಂಬಿಕೊಂಡು ಸಾಕ್ಷಾತ್ಕಾರ–ಸ್ವಾನುಭವಗಳನ್ನು ಪಡೆದುಕೊಂಡು ಆಕೆ ಸಂತೃಪ್ತಳಾದುದು ಶರಣರ ಸಂಗದಲ್ಲಿಯೇ. ಅದನ್ನು ತನ್ನ ನೂರಾರು ವಚನಗಳಲ್ಲಿ ಬರೆದು ವ್ಯಕ್ತಪಡಿಸಿದ್ದಾಳೆ. ಕಲ್ಯಾಣದಿಂದ ಕದಳಿಗೆ

ಆಕೆ ಹೋದುದು ಇನ್ನೂ ಸಾಧನೆ ಮಾಡಲಿಕ್ಕಲ್ಲ, ಅಥವಾ ಚನ್ನಮಲ್ಲಿಕಾರ್ಜುನನನ್ನು ಅರಸಿಕೊಂಡೂ ಅಲ್ಲ. ಅರಸುವಿಕೆ ಮುಗಿದು, ತನ್ನಲ್ಲೇ 'ಚಿನ್ನದೊಳಗಣ ಬಣ್ಣದಂತೆ ಇರುವ' ಅವನನ್ನು ಕಂಡುಕೊಂಡಿದ್ದಳು. ದೊಡ್ಡ ಕ್ಷೇತ್ರವಾದ ಶ್ರೀಶೈಲದಲ್ಲಿದ್ದು ಹೊಟ್ಟೆ ಹೊರೆದುಕೊಳ್ಳುವುದಕ್ಕೂ ಆಕೆ ಅತ್ತ ಸಾಗಲಿಲ್ಲ. ಸ್ವಭಾವತಃ ಅಂತರ್ಮುಖ ಪ್ರವೃತ್ತಿಯವಳಾದ ಅಕ್ಕಮಹಾದೇವಿಗೆ ಪ್ರಶಾಂತವಾದ ನಿಸರ್ಗದ ಮಧ್ಯದಲ್ಲಿ ಏಕಾಂತ ಸ್ಥಾನದಲ್ಲಿ ಇದ್ದು, ಧ್ಯಾನಾನಂದದಲ್ಲಿ ತಲ್ಲೀನವಾಗುವ ಹಂಬಲವಿತ್ತು, ಮತ್ತು ಇಚ್ಛಾ ಮರಣಿಯಾಗಿ ಶರೀರವನ್ನು ವಿಸರ್ಜಿಸುವ ಅಂದರೆ 'ಅಂಗವನ್ನು ಅವಸಾನಿಸುವ' (ಮ.ವ. ೩೩೨) ಬಯಕೆ ಇದ್ದಿತು. ಈ ಅಂಗದ ಅವಸಾನದ ಹಿಂದೆ ಉದ್ದೇಶಗಳೆರಡು. 1. ತನ್ನ ಯೋಗಸಾಮರ್ಥ್ಯವನ್ನು ಪರೀಕ್ಷೆಗೆ ಒಳಗು ಮಾಡುವುದು. 2. ತನ್ನ ಸಮಾಧಿಯನ್ನು ಕಟ್ಟಿಸಿ, ಗುಡಿಯನ್ನು ನಿರ್ಮಿಸಿ ಪೂಜಿಸಬಹುದಾದ ಅನುಯಾಯಿಗಳಿಗೆ ಬಹುದೇವೋಪಾಸನೆಗೆ ದೊರೆಯುವ ಅವಕಾಶವನ್ನು ತಪ್ಪಿಸುವುದು.

ಈ ಮರ್ಮವನ್ನರಿಯದೆ, ಮಹಾದೇವಿಯಕ್ಕನ ವಚನಗಳಲ್ಲಿ ಬರುವ ಆತ್ಮಕಥನವನ್ನು ಗಮನಿಸದೆ (ಬಹುಶಃ ಆಕೆಯ ವಚನಗಳು ಇನ್ನೂ ಅವನ ಕೈಗೆ ಎಟುಕಿರಲಿಕ್ಕಿಲ್ಲ) ಹರಿಹರನು ಆಕೆಯನ್ನು ಸಾಮಾನ್ಯ ಸಾಧಕಾವಸ್ಥೆಯಲ್ಲೇ, ಸ್ಥಾವರಲಿಂಗದ ಆರಾಧಕಳನ್ನಾಗಿ ಇರಿಸಿಯೇ ಕದಳಿಗೆ ಕರೆದೊಯ್ದು ಬಿಟ್ಟಿರುವನು.

## ಹರಿಹರ-ವ್ಯಕ್ತಿಗಳ ಒಳಹೊಕ್ಕು ನೋಡಲಾರ

ಕಡೆಯಲ್ಲಿ ಬರುವ ಕೌಶಿಕನ ಪ್ರಸಂಗವನ್ನು ನೋಡಿದರೂ ಅಷ್ಟೆ, ಹರಿಹರನಿಗೆ ವ್ಯಕ್ತಿಗಳ ಮನದೊಳಗೆ ಹೊಕ್ಕುನೋಡುವ, ಅವರೊಡನೆ ತಾದಾತ್ಮ್ಯ ಹೊಂದುವ 'ಕವಿದೃಷ್ಟಿ' ಅಷ್ಟಾಗಿ ಅಳವಟ್ಟಿರಲಿಕ್ಕಿಲ್ಲ ಎಂದು ಸಂಶಯಬರುವುದು. ಕವಿಯು ಮನೋವಿಜ್ಞಾನಿಯಂತೆ ಆಯಾ ಪಾತ್ರಗಳ ಹೃದಯದಲ್ಲಿ ಹೊಕ್ಕು ಅಲ್ಲಿನ ಸುಖ-ದುಃಖ, ಸಂವೇದನೆಗಳನ್ನು ಅರ್ಥಮಾಡಿಕೊಳ್ಳದಿದ್ದರೆ ಪಾತ್ರ ಚಿತ್ರಣದಲ್ಲಿ ಕೊರತೆ ಕಾಣದಿರದು; "ಅಕ್ಕಮಹಾದೇವಿ ಕದಳಿಗೆ ಹೋದನಂತರ ಸಹ ಕೌಶಿಕನ ಮನಸ್ಸು ಶಾಂತಗೊಂಡಿರುವುದಿಲ್ಲ. ಹೇಗಾದರೂ ಆಕೆಯನ್ನು ಪಡೆದೇ ತೀರಬೇಕೆಂದು! ಕಾಷಾಯ ವೇಷಧಾರಿಯಾಗಿ ಹೊರಡುವನು. ಅಲ್ಲಿ ಆಕೆಯನ್ನು ಕಂಡು) ಹೃದಯವನ್ನು ಪರಿವರ್ತಿಸಲು ಕೆಲವು ಮಠಾಧಿಕಾರಿಗಳಿಗೆ (ಕಲ್ಲುಮಠ, ಹುಲ್ಲುಮಠ) ಹೊನ್ನನ್ನಿತ್ತು, ಅವರನ್ನು ಬೋಧಿಸಲು ಕಳಿಸುವನು. ಏನಾದರೂ ಆಕೆ ಪರಿವರ್ತಿತಳಾಗಲಿಲ್ಲ. ಆಗ ಭಕ್ತಿಯಿಂದ ಪ್ರಾರ್ಥಿಸಲು ಕೈಲಾಸದಿಂದ ವಿಮಾನವಿಳಿತಂದು ಆಕೆಯನ್ನು ಕರೆದೊಯ್ದುದು......"

ತನ್ನ ಅರಮನೆಯಲ್ಲಿದ್ದಾಗಲೇ ಪರಿವರ್ತಿಸಲಾರದೆ ಸೋತ ಕೌಶಿಕನು ಆಕೆ ಸಿದ್ಧಪುರುಷಳಾದಾಗ ಮತ್ತೆ ಹಿಮ್ಮುಖವಾಗಿ ಎಳೆಯುವ ಭರವಸೆ ಇರಿಸಿಕೊಳ್ಳುವಷ್ಟು



ಅಪ್ರಬುದ್ಧನಾಗಿದ್ದನೇ? ಹುಟ್ಟಿ ಸ್ವಲ್ಪೇ ದೂರ ಬಂದ ನದಿಯನ್ನು ತಡೆಯಲಾರದವನು ಅದು ಸಮುದ್ರಗರ್ಭದಲ್ಲಿ ಬೆರೆತಾಗ ಮರಳಿ ತರುವಂಥ ದುಸ್ಸಾಹಸ ಮಾಡುವ ಮೂರ್ಖನಾಗಿದ್ದನೇ ? ಸಾಮಾನ್ಯವಾಗಿ ಅತಿ ಕಾಮುಕರು ವಿಲಾಸಿಗಳು, ಸುಖಜೀವಿ (Easy going) ಗಳೂ ಆಗಿರುವರು. ಅವರು ಸಹಜವಾಗಿ ಎಟುಕುವ ವಸ್ತುವನ್ನೋ ಅಥವಾ ದೌರ್ಜನ್ಯ ದಬ್ಬಾಳಿಕೆಯಿಂದ ಪಡೆಯಬಹುದಾದ ವಸ್ತುವನ್ನೋ ಹೊಂದಲೆತ್ನಿಸುವರೇ ವಿನಾ, ಕಾಡುಮೇಡುಗಳನ್ನಲೆದು, ದುರ್ಗಮ ಬಟ್ಟೆಯನ್ನು ತುಳಿದು, ಬೆಟ್ಟ-ಘಟ್ಟಗಳಲ್ಲಿ ಹಾಯ್ದು ಕಷ್ಟಪಟ್ಟು ವಸ್ತುವನ್ನು ಪಡೆಯುವವರಲ್ಲ. ಅಷ್ಟು ಕಷ್ಟ ಪಡಬೇಕಾದರೆ ವ್ಯಕ್ತಿಯು ವಿವೇಕಿ, ತ್ಯಾಗಿ, ಸಹನ ಶೀಲ ಆಗಿರುವನು. ಅಂತಹ ದುರ್ಗಮವಾದ ಕಾಡನ್ನು ಮೆಟ್ಟಿ ಬರಬೇಕಾದರೆ ಕೇವಲ ವೇಷಧಾರಿಯಿಂದ ಸಾಧ್ಯವಿಲ್ಲ. ಅಕ್ಕಮಹಾದೇವಿ ಸುಡುವ ತುಪ್ಪ ಎಂಬ ಅರಿವಾಗಲೇ ಆಗಿದ್ದುದಲ್ಲದೆ, ಕೇವಲ ದೈಹಿಕ ತೃಪ್ತಿಗಾಗಿಯೇ ಕಾತರಿಸುವವನು ಅವನಾಗಿದ್ದರೆ ಅಂತಃಪುರದಲ್ಲಿ ವಿಲಾಸಿನಿಯರಿಗೆ ಕೊರತೆ ಏನೂ ಇರಲಿಲ್ಲ.

ಕೌಶಿಕನು ಮತ್ತೆ ಅರಸಿಕೊಂಡು ಬರುವಲ್ಲಿ ಕಪಟತನ, ವೇಷಧಾರಿತ್ವವಿಲ್ಲ. ಅಂತರಂಗದ ಕ್ಷೋಭೆಯಿದೆ. ಹೇಗಾದರೂ ಆಕೆಯಿಂದ ಕ್ಷಮಿಸಲ್ಪಡಬೇಕು ಎಂಬ ಉತ್ಕಟ ಹಂಬಲವಿದೆ. ಪಶ್ಚಾತ್ತಾಪದಿಂದ ದಗ್ಧವಾದ, ಪಕ್ವವಾದ ಮನೋಭಾವವಿದೆ. ಒಮ್ಮೆಯಾದರೂ ಆಕೆಯನ್ನು ಕಂಡು, ಕ್ಷಮೆ ಕೇಳಿ, ಪಡೆಯದೆ ಇದ್ದಲ್ಲಿ ಅವನಿಗೆ ಬದುಕಿನಲ್ಲಿ ಸುಖವಿಲ್ಲ. ಶಾಂತಿಯಿಲ್ಲ. ಆ ಶಾಂತಿಯನ್ನು ಪಡೆಯಲಿಕ್ಕಾಗಿ ಇಷ್ಟು ಕಷ್ಟಕರ ಪ್ರಯಾಣ ಕೈಗೊಂಡಿದ್ದಾನೆ. ಕೌಶಿಕನ ಈ ಮನಃಸ್ಥಿತಿಯನ್ನು ಅರಿಯಲಾಗದೆ ಅವನನ್ನು ವೇಷಧಾರಿಯಂತೆ ಚಿತ್ರಿಸಿ ಇಲ್ಲಿ ನಿಜಕ್ಕೂ ಹರಿಹರನು ಸೋತಿದ್ದಾನೆ.

## ಸುಖೀ ಜಂಗಮನ ಪ್ರಸಂಗ

ವ್ಯಕ್ತಿಯ ಮನದ ಹವಣನ್ನು ಅರಿಯಲಾರದೆ ಸೋತಂತೆ, ಘಟನೆಗಳ ಒಳಹೊಕ್ಕು ಅರಿಯಲಾರದೆ ಹರಿಹರನು ಸೋತಿರುವನೆಂಬುದನ್ನು ಸ್ವೀಕರಿಸಲು ಬಸವರಾಜದೇವರ ರಗಳೆಯ ಎರಡು ಘಟನೆಗಳನ್ನು ಆರಿಸಿಕೊಳ್ಳಬಹುದು. ಬಸವಣ್ಣನು ಹರಿಹರನ ಪ್ರಾಣ, ಅವನ ಸರ್ವಸ್ವ! ಕವಿಯ ಆರಾಧ್ಯಗುರು ಬಸವಣ್ಣ ಎನ್ನುವುದು ಅಣ್ಣನನ್ನು ಹೊಗಳುವ ಪರಿಯಲ್ಲಿ ಸ್ಫುಟವಾಗಿ ತೋರುವುದು. ಇಷ್ಟೊಂದು ನಿಷ್ಠಾವಂತ ಭಕ್ತನಾಗಿಯೂ ಅತಿರೇಕದ ಭಕ್ತಿ ಪರವಶತೆಯಿಂದ ಬಸವಣ್ಣನ ನಿಲುವು ತತ್ತ್ವಗಳಿಗೆ ವಿರೋಧವಾದುದನ್ನು ತನ್ನ ಕಾವ್ಯದಲ್ಲಿ ಹೊಂದಿಸಿರುವನು. ಇದು, ತಾನು ಕೃತಿ ನಾಯಕನಿಗೆ ಮಾಡುವ ಅಪಚಾರ, ,ಅವನ ತತ್ವಕ್ಕೆ ವಿರೋಧವಾದುದು ಎಂದರಿಯದೆ ತಾನೊಂದು ಔದಾರ್ಯವನ್ನು ಮಾಡುತ್ತಿರುವೆ ಎಂಬ ಧನ್ಯಭಾವವು ಹರಿಹರನಲ್ಲಿದೆ.

ಈ ಪ್ರಸಂಗಗಳು ಯಾವುವೆಂದರೆ: ತನ್ನ ಧರ್ಮಪತ್ನಿ ಮಾಯಿದೇವಿಯನ್ನು

ಬಸವಣ್ಣನು ವಿಲಾಸಿ ಜಂಗಮನೊಬ್ಬನಿಗೆ ಅರ್ಪಿಸುವುದು (12ನೆ ಸ್ಥಲ); ಮತ್ತು ಜಂಗಮರಿಗೆ ಬಗೆಬಗೆಯಾಗಿ ಉಣ್ಣಿಸುವುದು (7ನೆ ಸ್ಥಲ). ಬಸವಣ್ಣನವರು ಬದುಕಿನಲ್ಲಿ ನೀತಿಗೆ ಬಹಳ ಸ್ಥಾನವನ್ನು ಕೊಟ್ಟವರು. ವ್ಯಕ್ತಿ-ಸಮಾಜ-ರಾಷ್ಟ್ರಗಳು ನೀತಿಯ ನೆಲೆಗಟ್ಟಿನ ಮೇಲೆಯೇ ರೂಹುಗೊಳ್ಳಬೇಕು ಎನ್ನುವ ಸಿದ್ಧಾಂತದ ಪ್ರತಿಪಾದಕರು. ಶಾರೀರಿಕ ನೀತಿಯನ್ನಷ್ಟೇ ಅಲ್ಲ, ಸರ್ವಾಂಗ ಶುದ್ಧಿಯನ್ನು ಒತ್ತಿಒತ್ತಿ ಬೋಧಿಸಿದವರು. ಅವರ ಪ್ರಕಾರ "ಸರ್ವಾಂಗವನ್ನು ತೊಳೆದುಕೊಂಡಲ್ಲದೆ ಕೂಡಲಸಂಗಮನು ಕೂಡಿ ಕೊಳ್ಳನು ! (ಬ,ಷ.ವ,೯೯೧). ಅದನ್ನು ಕೆಳಗಿನ ವಚನದಲ್ಲಿ ಅತ್ಯಂತ ಸ್ಪಷ್ಟ ಪಡಿಸಿರುವರು.

ಮನೆಯ ಗಂಡನ ಮನೆವಾರ್ತೆಯನು ಏನುಹೇಳವೆನವ್ವಾ
ಕಂಗಳೊಳಗಣ ಕಸವ ಕಳೆದಲ್ಲದೆ ನೋಡಲೀಯ
ಕಾಲ ತೊಳೆದಲ್ಲದೆ ಹೊದ್ದಲೀಯ, ಕೈಯ ತೊಳೆದಲ್ಲದೆ ಮುಟ್ಟಲೀಯ

ಇಂತೀ ಸರ್ವಾಂಗ ತಲೆದೊಳೆದ ಕಾರಣ ಕೂಡಲಸಂಗಮ ದೇವನೆನ್ನ ಕೂಡಿ ಕೊಂಡಿಹನವ್ವಾ. ಹೀಗೆ ಜ್ಞಾನೇಂದ್ರಿಯ, ಕರ್ಮೇಂದ್ರಿಯ, ಅಂತಃಕರಣ ಎಲ್ಲವೂ ಶುಚಿಯಾದವನು ಪರಮಾತ್ಮನಿಗೆ ಒಲುಮೆಯವನು ಎಂದು ಹೇಳುವ ಅಣ್ಣನವರು 'ಜಂಗಮ'ನೊಬ್ಬ ಬೇಡಿದನೆಂದರೆ ಪತ್ನಿಯನ್ನು ಕೊಡಬಲ್ಲರ ? "ಕಾಮವೇಕೋ ಲಿಂಗಪ್ರೇಮಿ ಎನಿಸುವಂಗೆ, ಕ್ರೋಧವೇಕೋ ಶರಣವೇದ್ಯನೆನಿಸುವಂಗೆ ?" ಎಂದು (ಬ.ಷ.ವ. ೧೧೮) ಶರಣನ ಲಕ್ಷಣಗಳನ್ನು ವಿವರಿಸುವ ಅಣ್ಣನವರು "ಹೆಂಗೂಸಿಲ್ಲದೆ ಇರ್ದುದಿಲ್ಲ" ಎಂದು ಬೇಡುವ ವಿಲಾಸಿಯನ್ನು 'ಜಂಗಮ' ಎಂದಾರೆಯೇ? ಅಣ್ಣನವರ ಜಂಗಮ ತತ್ತ್ವವು ಅದರ ಕ್ರಾಂತಿಯ ಜೀವಾಳ, ಅರ್ಥ ಶಾಸ್ತ್ರದ ಕೇಂದ್ರ ಸೂತ್ರ. ಧರ್ಮ ಲಾಂಛನಗಳನ್ನು ಧರಿಸಿ ಕಾವಿಹೊದ್ದವರನ್ನೆಲ್ಲ ಜಂಗಮರೆನ್ನುವಷ್ಟು ಬಸವಣ್ಣನವರು ಅವಿವೇಕಿಗಳಿದ್ದರೆ? "ಸಾವಿರಕ್ಕೊಬ್ಬ ಸಜ್ಜನ, ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಜಂಗಮ" ವೆಂದು ಚನ್ನಬಸವಣ್ಣನವರು ವ್ಯಾಖ್ಯಾನಿಸುವಾಗ "ಜಂಗಮತ್ವ"ವು ಎಷ್ಟು ದುರ್ಲಭ ಎನಿಸದಿರದು. "ಕಾಮವ ಕೊರೆದಾತ, ಹೇಮವ ಜರಿದಾತ, ಭಾನುವಿನ ಉದಯಕ್ಕೆ ಒಳಗಾಗದಾತನೇ ಶರಣ" ಎಂದು ಅಣ್ಣನವರು ಶರಣನ ಲಕ್ಷಣಗಳನ್ನು ವಿವಿಧ ಪರಿಯಲ್ಲಿ ಹೇಳುತ್ತಾರೆ. ಶರಣನೆಂದರೆ ಯಾರು ಎಂಬ ಪ್ರಶ್ನೆಗೆ ಉತ್ತರವನ್ನು ಶರಣ ಆದಯ್ಯನವರು ಹೀಗೆ ಹೇಳುತ್ತಾರೆ:

ತನುವಿನಲಿ ನಿರ್ಮೋಹ, ಮನದಲ್ಲಿ ನಿರಹಂಕಾರ
ಪ್ರಾಣದಲಿ ನಿರ್ಭಯ, ಚಿತ್ತದಲಿ ನಿರಪೇಕ್ಷೆ
ವಿಷಯದಲಿ ಉದಾಸೀನ, ಭಾವದಲಿ ದಿಗಂಬರ
ಜ್ಞಾನದಲಿ ಪರಮಾನಂದ ನೆಲೆಗೊಂಡ ಬಳಿಕ
ಸೌರಾಷ್ಟ್ರ ಸೋಮೇಶ್ವರ ಲಿಂಗವು ಬೇರಿಲ್ಲ ಕಾಣಭೋ ! (ಸಶೇಷ)

—*.*—



"ವಿಷವಟ್ಟಿಸುಡುವಲ್ಲಿ, ವೀರಭದ್ರ ಕೊಲುವಲ್ಲಿ ಕೂಡಲ ಸಂಗಯ್ಯಂಗೆ ಶರಣೆಂದು ಮೊರೆಯಿಟ್ಟರೆಲ್ಲರು. (ಬ.ಷ.ವ. ೫೪೮), ಕೂಡಲ ಸಂಗಮ ದೇವನು ದಕ್ಷಯಜ್ಞವ ಕೆಡಿಸಿದುದು ಮರೆದಿರಲ್ಲಾ (ಬ.ಷ.ವ. ೫೪೭), ಮುಂತಾದ ವಚನಗಳಲ್ಲಿ ಬಸವಣ್ಣನವರ ಆದಿಯಾಗಿ ಇತರ ಶರಣರು ಸಹ ಪೌರಾಣಿಕ ಶಿವನನ್ನು ಎತ್ತಿಹಿಡಿದು ಹರಿಯನ್ನು ಅಲ್ಲಗಳೆದಿರುವರು. ಆದ್ದರಿಂದ ಶರಣರು ಶಿವನ (ಪೌರಾಣಿಕ) ಆರಾಧಕರಲ್ಲವೆ ?" ಈ ಸಂದೇಹಕ್ಕೆ ಹೀಗೆ ಉತ್ತರವನ್ನು ನೀಡಬಹುದು. ಬಸವಣ್ಣನಾದಿಯಾಗಿ ಉಳಿದೆಲ್ಲ ಶರಣರು ಪೂರ್ವಾಶ್ರಮದಲ್ಲಿ, ಪೂರ್ವಸಂಸ್ಕಾರದಲ್ಲಿ ಶೈವಮಾರ್ಗೀಯರು, ಶಿವನ ಮತ್ತು ಶೈವಾಲಯಗಳ ನಂಟು ಪರಂಪರಾಗತವಾಗಿ ಅವರಿಗೆ ಬಂದುದು. ಆದರೆ ಬಸವಣ್ಣನ ಬದುಕಿನಲ್ಲಿಯೇ ಒಂದು ಬಗೆಯ ಮಾನಸಾಂತರ (Conversion) ವಾಯಿತು. ಆ ಮಾನಸಾಂತರ ಬಹುದೇವೋಪಾಸನೆ (Polytheism) ಯಿಂದ ಏಕದೇವೋಪಾಸನೆ (Monotheism) ಯತ್ತ. ಅದನ್ನು ಹರಿಹರನೇ ಒಂದು ಪ್ರಸಂಗದ ಮೂಲಕ ಚಿತ್ರಿಸಿದ್ದಾನೆ. ಕೂಡಲ ಸಂಗಮನನ್ನು ಬಸವಣ್ಣನು ಬಿಡುವಾಗ, ಬಿಡಲಾರದ ಮನೋವ್ಯಥೆಯಿಂದ ತೊಳಲುವಾಗ ಅವನಿಗೆ ಸಿಕ್ಕುವ (ಸಂಗಮನಾಥನಿಂದ ಅಂದರೆ ತನ್ನಂತರಂಗದಿಂದ) ಆಶ್ವಾಸನೆ ಹೀಗಿದೆ: "ನೆನೆಯೆ ಮುಂದಿರ್ದಪೆಂ ಕರೆದೊಡೋ ಎಂದಪೆಂ ಮನದೊಳಗೆ ಕರದೊಳಗೆ ತನುವಿನೊಳಗಿರ್ದಪೆಂ ನಿಂದಲ್ಲಿನಿಂದಪೆಂ ನಡೆದಲ್ಲಿ ನಡೆದಪೆಂ ಬಂದಲ್ಲಿ ಬಂದಪೆಂ ನುಡಿದಲ್ಲಿ ನುಡಿದಪೆಂ." ಈ ಶಬ್ದಗಳು-ಉಕ್ತಿಗಳು ಬಸವಣ್ಣನ ತಾತ್ವಿಕ ಪರಿವರ್ತನೆಯನ್ನು ಚಿತ್ರಿಸುತ್ತವೆ. "ದೇವಾಲಯದ ಗರ್ಭಗುಡಿಯೊಳಗೆ ಕುಳಿತವನೇ ಸಂಗಮನು ದೇವನು" ಎಂಬ ಭಾವ ತೊಲಗಿ, "ದೇವನು ಸರ್ವವ್ಯಾಪಕ, ಜಗತ್ತೇ ಅವನ ಮನೆ, ಅವನು ಸದಾ ಸನ್ನಿಹಿತನು" ಎಂಬ ಭಾವನೆಗಳು ಅಳವಡುತ್ತವೆ. ಆದ್ದರಿಂದ ಈ ಮಾನಸಾಂತರದ ಪೂರ್ವದಲ್ಲಿನ ವಚನಗಳು ಆ ಶೈವಪರ ಸೊಲ್ಲುಗಳು ಕಾಣಿಸಿಕೊಳ್ಳುವುದು ಸಹಜವೇ. ಅವುಗಳನ್ನು ಬಸವಣ್ಣನು ಅಂತಿಮ (final)ವಾಗಿ ಕೊಟ್ಟ ತತ್ವದ ರೂಪುರೇಷೆ ಹಿಡಿದು ವಿಭಜಿಸಿ, ವ್ಯಾಖ್ಯಾನಿಸುವುದು ಅವಶ್ಯಕವು. ಜೀವನಾನುಭವ, ತನ್ನವೇ ಆದ ನಿರ್ದಿಷ್ಟ ತಾತ್ವಿಕ ನಿರ್ಧಾರ (Conviction) ಗಳಿಲ್ಲದಾಗ ಬರೆದ ವಚನಗಳನ್ನು ಪರಿಪಕ್ವವಾದ ಐಕ್ಯಸ್ಥಿತಿಯಲ್ಲಿ ಹೊಂದಿಸಿ, ಓದಿ, ತಪ್ಪುನಿರ್ಧಾರಕ್ಕೆ ಬರುವುದು ಉಚಿತವೆ ?

ಐತಿಹಾಸಿಕ ಘಟನೆಗಳನ್ನು ಖಚಿತಪಡಿಸಿಕೊಳ್ಳದೆ ಭಾವುಕನಾಗಿ ಬರೆಯುವುದು ಹರಿಹರನ ಒಂದು ಸ್ವಾಭಾವಿಕ ಪ್ರವೃತ್ತಿ. ಅಂತೆಯೇ ಅಕ್ಕಮಹಾದೇವಿಯ ಬದುಕಿನಲ್ಲಿ ಮಹತ್ವಪೂರ್ಣ ಘಟನೆಯಾದ ಕಲ್ಯಾಣ ಸಂದರ್ಶನದ ಬಗ್ಗೆ ಏನೊಂದು ಮಾತನ್ನೂ ಆಡಿಲ್ಲ, ಸಾಧಕ ಜೀವನದ ಅಪರಿಪೂರ್ಣತೆಯನ್ನು ತುಂಬಿಕೊಂಡು ಸಾಕ್ಷಾತ್ಕಾರ-ಸ್ವಾನುಭವಗಳನ್ನು ಪಡೆದುಕೊಂಡು ಆಕೆ ಸಂತೃಪ್ತಳಾದುದು ಶರಣರ ಸಂಗದಲ್ಲಿಯೇ. ಅದನ್ನು ತನ್ನ ನೂರಾರು ವಚನಗಳಲ್ಲಿ ಬರೆದು ವ್ಯಕ್ತಪಡಿಸಿದ್ದಾಳೆ. ಕಲ್ಯಾಣದಿಂದ ಕದಳಿಗೆ

ಆಕೆ ಹೋದುದು ಇನ್ನೂ ಸಾಧನೆ ಮಾಡಲಿಕ್ಕಲ್ಲ, ಅಥವಾ ಚನ್ನಮಲ್ಲಿಕಾರ್ಜುನನನ್ನು ಅರಸಿಕೊಂಡೂ ಅಲ್ಲ. ಅರಸುವಿಕೆ ಮುಗಿದು, ತನ್ನಲ್ಲೇ 'ಚಿನ್ನದೊಳಗಣ ಬಣ್ಣದಂತೆ ಇರುವ' ಅವನನ್ನು ಕಂಡುಕೊಂಡಿದ್ದಳು. ದೊಡ್ಡ ಕ್ಷೇತ್ರವಾದ ಶ್ರೀಶೈಲದಲ್ಲಿದ್ದು ಹೊಟ್ಟೆ ಹೊರೆದುಕೊಳ್ಳುವುದಕ್ಕೂ ಆಕೆ ಅತ್ತ ಸಾಗಲಿಲ್ಲ. ಸ್ವಭಾವತಃ ಅಂತರ್ಮುಖ ಪ್ರವೃತ್ತಿಯವಳಾದ ಅಕ್ಕಮಹಾದೇವಿಗೆ ಪ್ರಶಾಂತವಾದ ನಿಸರ್ಗದ ಮಧ್ಯದಲ್ಲಿ ಏಕಾಂತ ಸ್ಥಾನದಲ್ಲಿ ಇದ್ದು, ಧ್ಯಾನಾನಂದದಲ್ಲಿ ತಲ್ಲೀನವಾಗುವ ಹಂಬಲವಿತ್ತು, ಮತ್ತು ಇಚ್ಛಾ ಮರಣೆಯಾಗಿ ಶರೀರವನ್ನು ವಿಸರ್ಜಿಸುವ ಅಂದರೆ 'ಅಂಗವನ್ನು ಅವಸಾನಿಸುವ' (ಮ.ವ. ೩೩೨) ಬಯಕೆ ಇದ್ದಿತು. ಈ ಅಂಗದ ಅವಸಾನದ ಹಿಂದೆ ಉದ್ದೇಶಗಳೆರಡು. 1. ತನ್ನ ಯೋಗಸಾಮರ್ಥ್ಯವನ್ನು ಪರೀಕ್ಷೆಗೆ ಒಳಗು ಮಾಡುವುದು. 2. ತನ್ನ ಸಮಾಧಿಯನ್ನು ಕಟ್ಟಿಸಿ, ಗುಡಿಯನ್ನು ನಿರ್ಮಿಸಿ ಪೂಜಿಸಬಹುದಾದ ಅನುಯಾಯಿಗಳಿಗೆ ಬಹುದೇವೋಪಾಸನೆಗೆ ದೊರೆಯುವ ಅವಕಾಶವನ್ನು ತಪ್ಪಿಸುವುದು.

ಈ ಮರ್ಮವನ್ನರಿಯದೆ, ಮಹಾದೇವಿಯಕ್ಕನ ವಚನಗಳಲ್ಲಿ ಬರುವ ಆತ್ಮ ಕಥನವನ್ನು ಗಮನಿಸದೆ (ಬಹುಶಃ ಆಕೆಯ ವಚನಗಳು ಇನ್ನೂ ಅವನ ಕೈಗೆ ಎಟುಕಿರಲಿಕ್ಕಿಲ್ಲ) ಹರಿಹರನು ಆಕೆಯನ್ನು ಸಾಮಾನ್ಯ ಸಾಧಕಾವಸ್ಥೆಯಲ್ಲೇ, ಸ್ಥಾವರಲಿಂಗದ ಆರಾಧಕಳನ್ನಾಗಿ ಇರಿಸಿಯೇ ಕದಳಿಗೆ ಕರೆದೊಯ್ದು ಬಿಟ್ಟಿರುವನು.

## ಹರಿಹರ–ವ್ಯಕ್ತಿಗಳ ಒಳಹೊಕ್ಕು ನೋಡಲಾರ

ಕಡೆಯಲ್ಲಿ ಬರುವ ಕೌಶಿಕನ ಪ್ರಸಂಗವನ್ನು ನೋಡಿದರೂ ಅಷ್ಟೆ, ಹರಿಹರನಿಗೆ ವ್ಯಕ್ತಿಗಳ ಮನದೊಳಗೆ ಹೊಕ್ಕುನೋಡುವ, ಅವರೊಡನೆ ತಾದಾತ್ಮ್ಯ ಹೊಂದುವ 'ಕವಿದೃಷ್ಟಿ' ಅಷ್ಟಾಗಿ ಅಳವಟ್ಟಿರಲಿಕ್ಕಿಲ್ಲ ಎಂದು ಸಂಶಯಬರುವುದು. ಕವಿಯು ಮನೋವಿಜ್ಞಾನಿಯಂತೆ ಆಯಾ ಪಾತ್ರಗಳ ಹೃದಯದಲ್ಲಿ ಹೊಕ್ಕು ಅಲ್ಲಿನ ಸುಖ–ದುಃಖ, ಸಂವೇದನೆಗಳನ್ನು ಅರ್ಥಮಾಡಿಕೊಳ್ಳದಿದ್ದರೆ ಪಾತ್ರ ಚಿತ್ರಣದಲ್ಲಿ ಕೊರತೆ ಕಾಣದಿರದು; "ಅಕ್ಕಮಹಾದೇವಿ ಕದಳಿಗೆ ಹೋದನಂತರ ಸಹ ಕೌಶಿಕನ ಮನಸ್ಸು ಶಾಂತಗೊಂಡಿರುವುದಿಲ್ಲ. ಹೇಗಾದರೂ ಆಕೆಯನ್ನು ಪಡೆದೇ ತೀರಬೇಕೆಂದು ! ಕಾಷಾಯ ವೇಷಧಾರಿಯಾಗಿ ಹೊರಡುವನು. ಅಲ್ಲಿ ಆಕೆಯನ್ನು ಕಂಡು) ಹೃದಯವನ್ನು ಪರಿವರ್ತಿಸಲು ಕೆಲವು ಮಠಾಧಿಕಾರಿಗಳಿಗೆ (ಕಲ್ಲುಮಠ, ಹುಲ್ಲುಮಠ) ಹೊನ್ನನ್ನಿತ್ತು ಅವರನ್ನು ಬೋಧಿಸಲು ಕಳಿಸುವನು. ಏನಾದರೂ ಆಕೆ ಪರಿವರ್ತಿತಳಾಗಲಿಲ್ಲ. ಆಗ ಭಕ್ತಿಯಿಂದ ಪ್ರಾರ್ಥಿಸಲು ಕೈಲಾಸದಿಂದ ವಿಮಾನವಿಳಿತಂದು ಆಕೆಯನ್ನು ಕರೆದೊಯ್ವುದು……."

ತನ್ನ ಅರಮನೆಯಲ್ಲಿದ್ದಾಗಲೇ ಪರಿವರ್ತಿಸಲಾರದೆ ಸೋತ ಕೌಶಿಕನು ಆಕೆ ಸಿದ್ಧಪುರುಷಳಾದಾಗ ಮತ್ತೆ ಹಿಮ್ಮುಖವಾಗಿ ಎಳೆಯುವ ಭರವಸೆ ಇರಿಸಿಕೊಳ್ಳುವಷ್ಟು



ಅಪ್ರಬುದ್ಧನಾಗಿದ್ದನೇ? ಹುಟ್ಟಿ ಸ್ವಲ್ಪೇ ದೂರ ಬಂದ ನದಿಯನ್ನು ತಡೆಯಲಾರದವನು ಅದು ಸಮುದ್ರಗರ್ಭದಲ್ಲಿ ಬೆರೆತಾಗ ಮರಳಿ ತರುವಂಥ ದುಸ್ಸಾಹಸ ಮಾಡುವ ಮೂರ್ಖನಾಗಿದ್ದನೇ ? ಸಾಮಾನ್ಯವಾಗಿ ಅತಿ ಕಾಮುಕರು ವಿಲಾಸಿಗಳು, ಸುಖಜೀವಿ (Easy going) ಗಳೂ ಆಗಿರುವರು. ಅವರು ಸಹಜವಾಗಿ ಎಟುಕುವ ವಸ್ತುವನ್ನೋ ಅಥವಾ ದೌರ್ಜನ್ಯ ದಬ್ಬಾಳಿಕೆಯಿಂದ ಪಡೆಯಬಹುದಾದ ವಸ್ತುವನ್ನೋ ಹೊಂದಲೆತ್ನಿಸುವರೇ ವಿನಾ, ಕಾಡುಮೇಡುಗಳನ್ನಲೆದು, ದುರ್ಗಮ ಬಟ್ಟೆಯನ್ನು ತುಳಿದು, ಬೆಟ್ಟ–ಘಟ್ಟಗಳಲ್ಲಿ ಹಾಯ್ದು ಕಷ್ಟಪಟ್ಟು ವಸ್ತುವನ್ನು ಪಡೆಯುವವರಲ್ಲ. ಅಷ್ಟು ಕಷ್ಟ ಪಡಬೇಕಾದರೆ ವ್ಯಕ್ತಿಯು ವಿವೇಕಿ, ತ್ಯಾಗಿ, ಸಹನ ಶೀಲ ಆಗಿರುವನು. ಅಂತಹ ದುರ್ಗಮವಾದ ಕಾಡನ್ನು ಮೆಟ್ಟಿ ಬರಬೇಕಾದರೆ ಕೇವಲ ವೇಷಧಾರಿಯಿಂದ ಸಾಧ್ಯವಿಲ್ಲ. ಅಕ್ಕಮಹಾದೇವಿ ಸುಡುವ ತುಪ್ಪ ಎಂಬ ಅರಿವಾಗಲೇ ಆಗಿದ್ದುದಲ್ಲದೆ, ಕೇವಲ ದೈಹಿಕ ತೃಪ್ತಿಗಾಗಿಯೇ ಕಾತರಿಸುವವನು ಅವನಾಗಿದ್ದರೆ ಅಂತಃಪುರದಲ್ಲಿ ವಿಲಾಸಿನಿಯರಿಗೆ ಕೊರತೆ ಏನೂ ಇರಲಿಲ್ಲ.

ಕೌಶಿಕನು ಮತ್ತೆ ಅರಸಿಕೊಂಡು ಬರುವಲ್ಲಿ ಕಪಟತನ, ವೇಷಧಾರಿತ್ವವಿಲ್ಲ. ಅಂತರಂಗದ ಕ್ಷೋಭೆಯಿದೆ. ಹೇಗಾದರೂ ಆಕೆಯಿಂದ ಕ್ಷಮಿಸಲ್ಪಡಬೇಕು ಎಂಬ ಉತ್ಕಟ ಹಂಬಲವಿದೆ. ಪಶ್ಚಾತ್ತಾಪದಿಂದ ದಗ್ಧವಾದ, ಪಕ್ವವಾದ ಮನೋಭಾವವಿದೆ. ಒಮ್ಮೆಯಾದರೂ ಆಕೆಯನ್ನು ಕಂಡು, ಕ್ಷಮೆ ಕೇಳಿ, ಪಡೆಯದೆ ಇದ್ದಲ್ಲಿ ಅವನಿಗೆ ಬದುಕಿನಲ್ಲಿ ಸುಖವಿಲ್ಲ. ಶಾಂತಿಯಿಲ್ಲ. ಆ ಶಾಂತಿಯನ್ನು ಪಡೆಯಲಿಕ್ಕಾಗಿ ಇಷ್ಟು ಕಷ್ಟಕರ ಪ್ರಯಾಣ ಕೈಗೊಂಡಿದ್ದಾನೆ. ಕೌಶಿಕನ ಈ ಮನಃಸ್ಥಿತಿಯನ್ನು ಅರಿಯಲಾಗದೆ ಅವನನ್ನು ವೇಷಧಾರಿಯಂತೆ ಚಿತ್ರಿಸಿ ಇಲ್ಲಿ ನಿಜಕ್ಕೂ ಹರಿಹರನು ಸೋತಿದ್ದಾನೆ.

## ಸುಖೀ ಜಂಗಮನ ಪ್ರಸಂಗ

ವ್ಯಕ್ತಿಯ ಮನದ ಹವಣನ್ನು ಅರಿಯಲಾರದೆ ಸೋತಂತೆ, ಘಟನೆಗಳ ಒಳಹೊಕ್ಕು ಅರಿಯಲಾರದೆ ಹರಿಹರನು ಸೋತಿರುವನೆಂಬುದನ್ನು ಸ್ವೀಕರಿಸಲು ಬಸವರಾಜದೇವರ ರಗಳೆಯ ಎರಡು ಘಟನೆಗಳನ್ನು ಆರಿಸಿಕೊಳ್ಳಬಹುದು. ಬಸವಣ್ಣನು ಹರಿಹರನ ಪ್ರಾಣ, ಅವನ ಸರ್ವಸ್ವ ! ಕವಿಯ ಆರಾಧ್ಯಗುರು ಬಸವಣ್ಣ ಎನ್ನುವುದು ಅಣ್ಣನನ್ನು ಹೊಗಳುವ ಪರಿಯಲ್ಲಿ ಸ್ಫುಟವಾಗಿ ತೋರುವುದು. ಇಷ್ಟೊಂದು ನಿಷ್ಠಾವಂತ ಭಕ್ತನಾಗಿಯೂ ಅತಿರೇಕದ ಭಕ್ತಿ ಪರವಶತೆಯಿಂದ ಬಸವಣ್ಣನ ನಿಲುವು ತತ್ತ್ವಗಳಿಗೆ ವಿರೋಧವಾದುದನ್ನು ತನ್ನ ಕಾವ್ಯದಲ್ಲಿ ಹೊಂದಿಸಿರುವನು. ಇದು, ತಾನು ಕೃತಿ ನಾಯಕನಿಗೆ ಮಾಡುವ ಅಪಚಾರ, ಅವನ ತತ್ವಕ್ಕೆ ವಿರೋಧವಾದುದು ಎಂದರಿಯದೆ ತಾನೊಂದು ಔದಾರ್ಯವನ್ನು ಮಾಡುತ್ತಿರುವೆ ಎಂಬ ಧನ್ಯಭಾವವು ಹರಿಹರನಲ್ಲಿದೆ.

ಈ ಪ್ರಸಂಗಗಳು ಯಾವುವೆಂದರೆ: ತನ್ನ ಧರ್ಮಪತ್ನಿ ಮಾಯಿದೇವಿಯನ್ನು

ಆಕೆ ಹೋದುದು ಇನ್ನೂ ಸಾಧನೆ ಮಾಡಲಿಕ್ಕಲ್ಲ, ಅಥವಾ ಚನ್ನಮಲ್ಲಿಕಾರ್ಜುನನನ್ನು ಅರಸಿಕೊಂಡೂ ಅಲ್ಲ. ಅರಸುವಿಕೆ ಮುಗಿದು, ತನ್ನಲ್ಲೇ 'ಚಿನ್ನದೊಳಗಣ ಬಣ್ಣದಂತೆ ಇರುವ' ಅವನನ್ನು ಕಂಡುಕೊಂಡಿದ್ದಳು. ದೊಡ್ಡ ಕ್ಷೇತ್ರವಾದ ಶ್ರೀಶೈಲದಲ್ಲಿದ್ದು ಹೊಟ್ಟೆ ಹೊರೆದುಕೊಳ್ಳುವುದಕ್ಕೂ ಆಕೆ ಅತ್ತ ಸಾಗಲಿಲ್ಲ. ಸ್ವಭಾವತಃ ಅಂತರ್ಮುಖ ಪ್ರವೃತ್ತಿಯವಳಾದ ಅಕ್ಕಮಹಾದೇವಿಗೆ ಪ್ರಶಾಂತವಾದ ನಿಸರ್ಗದ ಮಧ್ಯದಲ್ಲಿ ಏಕಾಂತ ಸ್ಥಾನದಲ್ಲಿ ಇದ್ದು, ಧ್ಯಾನಾನಂದದಲ್ಲಿ ತಲ್ಲೀನವಾಗುವ ಹಂಬಲವಿತ್ತು, ಮತ್ತು ಇಚ್ಛಾ ಮರಣಿಯಾಗಿ ಶರೀರವನ್ನು ವಿಸರ್ಜಿಸುವ ಅಂದರೆ 'ಅಂಗವನ್ನು ಅವಸಾನಿಸುವ' (ಮ.ವ. ೩೩೨) ಬಯಕೆ ಇದ್ದಿತು. ಈ ಅಂಗದ ಅವಸಾನದ ಹಿಂದೆ ಉದ್ದೇಶಗಳೆರಡು. 1. ತನ್ನ ಯೋಗಸಾಮರ್ಥ್ಯವನ್ನು ಪರೀಕ್ಷೆಗೆ ಒಳಗು ಮಾಡುವುದು. 2. ತನ್ನ ಸಮಾಧಿಯನ್ನು ಕಟ್ಟಿಸಿ, ಗುಡಿಯನ್ನು ನಿರ್ಮಿಸಿ ಪೂಜಿಸಬಹುದಾದ ಅನುಯಾಯಿಗಳಿಗೆ ಬಹುದೇವೋಪಾಸನೆಗೆ ದೊರೆಯುವ ಅವಕಾಶವನ್ನು ತಪ್ಪಿಸುವುದು.

ಈ ಮರ್ಮವನ್ನರಿಯದೆ, ಮಹಾದೇವಿಯಕ್ಕನ ವಚನಗಳಲ್ಲಿ ಬರುವ ಆತ್ಮ ಕಥನವನ್ನು ಗಮನಿಸದೆ (ಬಹುಶಃ ಆಕೆಯ ವಚನಗಳು ಇನ್ನೂ ಅವನ ಕೈಗೆ ಎಟುಕಿರಲಿಕ್ಕಿಲ್ಲ) ಹರಿಹರನು ಆಕೆಯನ್ನು ಸಾಮಾನ್ಯ ಸಾಧಕಾವಸ್ಥೆಯಲ್ಲೇ, ಸ್ಥಾವರಲಿಂಗದ ಆರಾಧಕಳನ್ನಾಗಿ ಇರಿಸಿಯೇ ಕದಳಿಗೆ ಕರೆದೊಯ್ದು ಬಿಟ್ಟಿರುವನು.

### ಹರಿಹರ-ವ್ಯಕ್ತಿಗಳ ಒಳಹೊಕ್ಕು ನೋಡಲಾರ

ಕಡೆಯಲ್ಲಿ ಬರುವ ಕೌಶಿಕನ ಪ್ರಸಂಗವನ್ನು ನೋಡಿದರೂ ಅಷ್ಟೆ, ಹರಿಹರನಿಗೆ ವ್ಯಕ್ತಿಗಳ ಮನದೊಳಗೆ ಹೊಕ್ಕುನೋಡುವ, ಅವರೊಡನೆ ತಾದಾತ್ಮ್ಯ ಹೊಂದುವ 'ಕವಿದೃಷ್ಟಿ' ಅಷ್ಟಾಗಿ ಅಳವಟ್ಟಿರಲಿಕ್ಕಿಲ್ಲ ಎಂದು ಸಂಶಯಬರುವುದು. ಕವಿಯು ಮನೋವಿಜ್ಞಾನಿಯಂತೆ ಆಯಾ ಪಾತ್ರಗಳ ಹೃದಯದಲ್ಲಿ ಹೊಕ್ಕು ಅಲ್ಲಿನ ಸುಖ-ದುಃಖ, ಸಂವೇದನೆಗಳನ್ನು ಅರ್ಥಮಾಡಿಕೊಳ್ಳದಿದ್ದರೆ ಪಾತ್ರ ಚಿತ್ರಣದಲ್ಲಿ ಕೊರತೆ ಕಾಣದಿರದು; "ಅಕ್ಕಮಹಾದೇವಿ ಕದಳಿಗೆ ಹೋದನಂತರ ಸಹ ಕೌಶಿಕನ ಮನಸ್ಸು ಶಾಂತಗೊಂಡಿರುವುದಿಲ್ಲ. ಹೇಗಾದರೂ ಆಕೆಯನ್ನು ಪಡೆದೇ ತೀರಬೇಕೆಂದು! ಕಾಷಾಯ ವೇಷಧಾರಿಯಾಗಿ ಹೊರಡುವನು. ಅಲ್ಲಿ ಆಕೆಯನ್ನು ಕಂಡು) ಹೃದಯವನ್ನು ಪರಿವರ್ತಿಸಲು ಕೆಲವು ಮಠಾಧಿಕಾರಿಗಳಿಗೆ (ಕಲ್ಲುಮಠ, ಹುಲ್ಲುಮಠ) ಹೊನ್ನನ್ನಿತ್ತು ಅವರನ್ನು ಬೋಧಿಸಲು ಕಳಿಸುವನು. ಏನಾದರೂ ಆಕೆ ಪರಿವರ್ತಿತಳಾಗಲಿಲ್ಲ. ಆಗ ಭಕ್ತಿಯಿಂದ ಪ್ರಾರ್ಥಿಸಲು ಕೈಲಾಸದಿಂದ ವಿಮಾನವಿಳಿತಂದು ಆಕೆಯನ್ನು ಕರೆದೊಯ್ದುದು ......."

ತನ್ನ ಅರಮನೆಯಲ್ಲಿದ್ದಾಗಲೇ ಪರಿವರ್ತಿಸಲಾರದೆ ಸೋತ ಕೌಶಿಕನು ಆಕೆ ಸಿದ್ಧಪುರುಷಳಾದಾಗ ಮತ್ತೆ ಹಿಮ್ಮುಖವಾಗಿ ಎಳೆಯುವ ಭರವಸೆ ಇರಿಸಿಕೊಳ್ಳುವಷ್ಟು



ಅಪ್ರಬುದ್ಧನಾಗಿದ್ದನೇ? ಹುಟ್ಟಿ ಸ್ವಲ್ಪೇ ದೂರ ಬಂದ ನದಿಯನ್ನು ತಡೆಯಲಾರದವನು ಅದು ಸಮುದ್ರಗರ್ಭದಲ್ಲಿ ಬೆರೆತಾಗ ಮರಳಿ ತರುವಂಥ ದುಸ್ಸಾಹಸ ಮಾಡುವ ಮೂರ್ಖನಾಗಿದ್ದನೇ ? ಸಾಮಾನ್ಯವಾಗಿ ಅತಿ ಕಾಮುಕರು ವಿಲಾಸಿಗಳು, ಸುಖಜೀವಿ (Easy going) ಗಳೂ ಆಗಿರುವರು. ಅವರು ಸಹಜವಾಗಿ ಎಟುಕುವ ವಸ್ತುವನ್ನೋ ಅಥವಾ ದೌರ್ಜನ್ಯ ದಬ್ಬಾಳಿಕೆಯಿಂದ ಪಡೆಯಬಹುದಾದ ವಸ್ತುವನ್ನೋ ಹೊಂದಲೆತ್ನಿಸುವರೇ ವಿನಾ, ಕಾಡುಮೇಡುಗಳನ್ನಲೆದು, ದುರ್ಗಮ ಬಟ್ಟೆಯನ್ನು ತುಳಿದು, ಬೆಟ್ಟ-ಘಟ್ಟಗಳಲ್ಲಿ ಹಾಯ್ದು ಕಷ್ಟಪಟ್ಟು ವಸ್ತುವನ್ನು ಪಡೆಯುವವರಲ್ಲ. ಅಷ್ಟು ಕಷ್ಟ ಪಡಬೇಕಾದರೆ ವ್ಯಕ್ತಿಯು ವಿವೇಕಿ, ತ್ಯಾಗಿ, ಸಹನ ಶೀಲ ಆಗಿರುವನು. ಅಂತಹ ದುರ್ಗಮವಾದ ಕಾಡನ್ನು ಮುಟ್ಟಿ ಬರಬೇಕಾದರೆ ಕೇವಲ ವೇಷಧಾರಿಯಿಂದ ಸಾಧ್ಯವಿಲ್ಲ. ಅಕ್ಕಮಹಾದೇವಿ ಸುಡುವ ತುಪ್ಪ ಎಂಬ ಅರಿವಾಗಲೇ ಆಗಿದ್ದುದಲ್ಲದೆ, ಕೇವಲ ದೈಹಿಕ ತೃಪ್ತಿಗಾಗಿಯೇ ಕಾತರಿಸುವವನು ಅವನಾಗಿದ್ದರೆ ಅಂತಃಪುರದಲ್ಲಿ ವಿಲಾಸಿನಿಯರಿಗೆ ಕೊರತೆ ಏನೂ ಇರಲಿಲ್ಲ.

ಕೌಶಿಕನು ಮತ್ತೆ ಅರಸಿಕೊಂಡು ಬರುವಲ್ಲಿ ಕಪಟತನ, ವೇಷಧಾರಿತ್ವವಿಲ್ಲ. ಅಂತರಂಗದ ಕ್ಷೋಭೆಯಿದೆ. ಹೇಗಾದರೂ ಆಕೆಯಿಂದ ಕ್ಷಮಿಸಲ್ಪಡಬೇಕು ಎಂಬ ಉತ್ಕಟ ಹಂಬಲವಿದೆ. ಪಶ್ಚಾತ್ತಾಪದಿಂದ ದಗ್ಧವಾದ, ಪಕ್ವವಾದ ಮನೋಭಾವವಿದೆ. ಒಮ್ಮೆಯಾದರೂ ಆಕೆಯನ್ನು ಕಂಡು, ಕ್ಷಮೆ ಕೇಳಿ, ಪಡೆಯದೆ ಇದ್ದಲ್ಲಿ ಅವನಿಗೆ ಬದುಕಿನಲ್ಲಿ ಸುಖವಿಲ್ಲ. ಶಾಂತಿಯಿಲ್ಲ. ಆ ಶಾಂತಿಯನ್ನು ಪಡೆಯಲಿಕ್ಕಾಗಿ ಇಷ್ಟು ಕಷ್ಟಕರ ಪ್ರಯಾಣ ಕೈಗೊಂಡಿದ್ದಾನೆ. ಕೌಶಿಕನ ಈ ಮನಃಸ್ಥಿತಿಯನ್ನು ಅರಿಯಲಾಗದೆ ಅವನನ್ನು ವೇಷಧಾರಿಯಂತೆ ಚಿತ್ರಿಸಿ ಇಲ್ಲಿ ನಿಜಕ್ಕೂ ಹರಿಹರನು ಸೋತಿದ್ದಾನೆ.

### ಸುಖೀ ಜಂಗಮನ ಪ್ರಸಂಗ

ವ್ಯಕ್ತಿಯ ಮನದ ಹವಣನ್ನು ಅರಿಯಲಾರದೆ ಸೋತಂತೆ, ಘಟನೆಗಳ ಒಳಹೊಕ್ಕು ಅರಿಯಲಾರದೆ ಹರಿಹರನು ಸೋತಿರುವನೆಂಬುದನ್ನು ಸ್ವೀಕರಿಸಲು ಬಸವರಾಜದೇವರ ರಗಳೆಯ ಎರಡು ಘಟನೆಗಳನ್ನು ಆರಿಸಿಕೊಳ್ಳಬಹುದು. ಬಸವಣ್ಣನು ಹರಿಹರನ ಪ್ರಾಣ, ಅವನ ಸರ್ವಸ್ವ! ಕವಿಯ ಆರಾಧ್ಯಗುರು ಬಸವಣ್ಣ ಎನ್ನುವುದು ಅಣ್ಣನನ್ನು ಹೊಗಳುವ ಪರಿಯಲ್ಲಿ ಸ್ಫುಟವಾಗಿ ತೋರುವುದು. ಇಷ್ಟೊಂದು ನಿಷ್ಠಾವಂತ ಭಕ್ತನಾಗಿಯೂ ಅತಿರೇಕದ ಭಕ್ತಿ ಪರವಶತೆಯಿಂದ ಬಸವಣ್ಣನ ನಿಲುವು ತತ್ತ್ವಗಳಿಗೆ ವಿರೋಧವಾದುದನ್ನು ತನ್ನ ಕಾವ್ಯದಲ್ಲಿ ಹೊಂದಿಸಿರುವನು. ಇದು, ತಾನು ಕೃತಿನಾಯಕನಿಗೆ ಮಾಡುವ ಅಪಚಾರ, ಅವನ ತತ್ವಕ್ಕೆ ವಿರೋಧವಾದುದು ಎಂದರಿಯದೆ ತಾನೊಂದು ಔದಾರ್ಯವನ್ನು ಮಾಡುತ್ತಿರುವೆ ಎಂಬ ಧನ್ಯಭಾವವು ಹರಿಹರನಲ್ಲಿದೆ.

ಈ ಪ್ರಸಂಗಗಳು ಯಾವುವೆಂದರೆ: ತನ್ನ ಧರ್ಮಪತ್ನಿ ಮಾಯಿದೇವಿಯನ್ನು

ಬಸವಣ್ಣನು ವಿಲಾಸಿ ಜಂಗಮನೊಬ್ಬನಿಗೆ ಅರ್ಪಿಸುವುದು (12ನೆ ಸ್ಥಲ); ಮತ್ತು ಜಂಗಮರಿಗೆ ಬಗೆಬಗೆಯಾಗಿ ಉಣ್ಣಿಸುವುದು (7ನೆ ಸ್ಥಲ). ಬಸವಣ್ಣನವರು ಬದುಕಿನಲ್ಲಿ ನೀತಿಗೆ ಬಹಳ ಸ್ಥಾನವನ್ನು ಕೊಟ್ಟವರು. ವ್ಯಕ್ತಿ–ಸಮಾಜ–ರಾಷ್ಟ್ರಗಳು ನೀತಿಯ ನೆಲೆಗಟ್ಟಿನ ಮೇಲೆಯೇ ರೂಹುಗೊಳ್ಳಬೇಕು ಎನ್ನುವ ಸಿದ್ಧಾಂತದ ಪ್ರತಿಪಾದಕರು. ಶಾರೀರಿಕ ನೀತಿಯನ್ನಷ್ಟೇ ಅಲ್ಲ, ಸರ್ವಾಂಗ ಶುದ್ಧಿಯನ್ನು ಒತ್ತಿಒತ್ತಿ ಬೋಧಿಸಿದವರು. ಅವರ ಪ್ರಕಾರ "ಸರ್ವಾಂಗವನ್ನು ತೊಳೆದುಕೊಂಡಲ್ಲದೆ ಕೂಡಲಸಂಗಮನು ಕೂಡಿಕೊಳ್ಳನು ! (ಬ,ಷ.ವ, ೯೯೧). ಅದನ್ನು ಕೆಳಗಿನ ವಚನದಲ್ಲಿ ಅತ್ಯಂತ ಸ್ಪಷ್ಟಪಡಿಸಿರುವರು.

ಮನೆಯ ಗಂಡನ ಮನೆವಾರ್ತೆಯನು ಏನುಹೇಳವೆನವ್ವಾ
ಕಂಗಳೊಳಗಣ ಕಸವ ಕಳೆದಲ್ಲದೆ ನೋಡಲೀಯ
ಕಾಲ ತೊಳೆದಲ್ಲದೆ ಹೊದ್ದಲೀಯ, ಕೈಯ ತೊಳೆದಲ್ಲದೆ ಮುಟ್ಟಲೀಯ

ಇಂತೀ ಸರ್ವಾಂಗ ತಲೆದೊಳೆದ ಕಾರಣ ಕೂಡಲಸಂಗಮ ದೇವನೆನ್ನ ಕೂಡಿ ಕೊಂಡಿಹನವ್ವಾ. ಹೀಗೆ ಜ್ಞಾನೇಂದ್ರಿಯ, ಕರ್ಮೇಂದ್ರಿಯ, ಅಂತಃಕರಣ ಎಲ್ಲವೂ ಶುಚಿಯಾದವನು ಪರಮಾತ್ಮನಿಗೆ ಒಲುಮೆಯುವನು ಎಂದು ಹೇಳುವ ಅಣ್ಣನವರು 'ಜಂಗಮ'ನೊಬ್ಬ ಬೇಡಿದನೆಂದರೆ ಪತ್ನಿಯನ್ನು ಕೊಡಬಲ್ಲರ ? "ಕಾಮವೇಕೋ ಲಿಂಗಪ್ರೇಮಿ ಎನಿಸುವಂಗೆ, ಕ್ರೋಧವೇಕೋ ಶರಣವೇದ್ಯನೆನಿಸುವಂಗೆ ?" ಎಂದು (ಬ.ಷ.ವ. ೧೧೮) ಶರಣನ ಲಕ್ಷಣಗಳನ್ನು ವಿವರಿಸುವ ಅಣ್ಣನವರು "ಹೆಂಗೂಸಿಲ್ಲದೆ ಇರ್ದುದಿಲ್ಲ" ಎಂದು ಬೇಡುವ ವಿಲಾಸಿಯನ್ನು 'ಜಂಗಮ' ಎಂದಾರೆಯೋ? ಅಣ್ಣನವರ ಜಂಗಮ ತತ್ತ್ವವು ಅದರ ಕ್ರಾಂತಿಯ ಜೀವಾಳ, ಅರ್ಥ ಶಾಸ್ತ್ರದ ಕೇಂದ್ರ ಸೂತ್ರ. ಧರ್ಮ ಲಾಂಛನಗಳನ್ನು ಧರಿಸಿ ಕಾವಿಹೊದ್ದವರನ್ನೆಲ್ಲ ಜಂಗಮರೆನ್ನುವಷ್ಟು ಬಸವಣ್ಣನವರು ಅವಿವೇಕಿಗಳಿದ್ದರೆ ? "ಸಾವಿರಕ್ಕೊಬ್ಬ ಸಜ್ಜನ, ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಜಂಗಮ" ವೆಂದು ಚನ್ನಬಸವಣ್ಣನವರು ವ್ಯಾಖ್ಯಾನಿಸುವಾಗ "ಜಂಗಮತ್ವ"ವು ಎಷ್ಟು ದುರ್ಲಭ ಎನಿಸದಿರದು. "ಕಾಮವ ತೊರೆದಾತ, ಹೇಮವ ಜರಿದಾತ, ಭಾನುವಿನ ಉದಯಕ್ಕೆ ಒಳಗಾಗದಾತನೇ ಶರಣ" ಎಂದು ಅಣ್ಣನವರು ಶರಣನ ಲಕ್ಷಣಗಳನ್ನು ವಿವಿಧ ಪರಿಯಲ್ಲಿ ಹೇಳುತ್ತಾರೆ. ಶರಣನೆಂದರೆ ಯಾರು ಎಂಬ ಪ್ರಶ್ನೆಗೆ ಉತ್ತರವನ್ನು ಶರಣ ಆದಯ್ಯನವರು ಹೀಗೆ ಹೇಳುತ್ತಾರೆ:

ತನುವಿನಲಿ ನಿರ್ಮೋಹ, ಮನದಲ್ಲಿ ನಿರಹಂಕಾರ
ಪ್ರಾಣದಲಿ ನಿರ್ಭಯ, ಚಿತ್ತದಲಿ ನಿರಪೇಕ್ಷೆ
ವಿಷಯದಲಿ ಉದಾಸೀನ, ಭಾವದಲಿ ದಿಗಂಬರ
ಜ್ಞಾನದಲಿ ಪರಮಾನಂದ ನೆಲೆಗೊಂಡ ಬಳಿಕ
ಸೌರಾಷ್ಟ್ರ ಸೋಮೇಶ್ವರ ಲಿಂಗವು ಬೇರಿಲ್ಲ ಕಾಣಿಭೋ !

(ಸಶೇಷ)



—*•*—





# ಮೂರು ಮಹಾಶಕ್ತಿಗಳು

— ಮಾತಾಜಿ

**ಕ್ರಿಯಾಶಕ್ತಿ ಅಕ್ಕನಾಗಮ್ಮ :**

ಬಸವಣ್ಣನ ಬಾಳನ್ನು ನನ್ನಷ್ಟು ಒಳಹೊಕ್ಕು ಅರಿತವರು ಮತ್ತಾರೂ ಇರಲಿಕ್ಕಿಲ್ಲ. ಆ ಧೀಮಂತ ಮಗುವಿನ ಪ್ರತಿಭೆಯನ್ನು, ವಿಚಾರ ಪ್ರೌಢಿಮೆಯನ್ನು ಮೊಟ್ಟಮೊದಲು ಗುರುತಿಸಿದವಳು ನಾನು. ನನ್ನ ಕಣ್ಣಾಲಿಯೆಂದು ಭಾವಿಸಿ ಜೋಪಾನ ಮಾಡಿದೆ. ಹೃದಯವನ್ನು ಎದೆಯುಗೂಡು ತನ್ನ ಅಂತರಂಗದಲ್ಲಿರಿಸಿಕೊಂಡು ಸಂರಕ್ಷಿಸುವಂತೆ ತಮ್ಮನನ್ನು ಪೋಷಿಸಿದೆ.

ಅಂದು ಮುದ್ದು ಕುವರ ಬಸವೇಶನಿಗೆ ಉಪನಯನ ಸಂಸ್ಕಾರದ ಸಿದ್ಧತೆ; ಎಲ್ಲೆಡೆಯಿಂದ ನಂಟರಿಷ್ಟರ ಆಗಮನ. ಆದರೆ 'ನನಗೆ ಮೊದಲು ಸಂಸ್ಕಾರವಾಗಬೇಕು, ನಂತರ ಅವನಿಗೆ' ಎಂದು ಹಟ ಹಿಡಿದ. ತಂದೆ ಮಾದರಸರಾದಿಯಾಗಿ ನೆರೆದವರೆಲ್ಲ ಹೇಳಿದರು ಬುದ್ಧಿವಾದವನ್ನು. "ಮಗು, ನಮ್ಮ ಸಂಪ್ರದಾಯಕ್ಕೆ ತಕ್ಕಂತೆ ನಾವಿರಬೇಕು. ಆ ಆಚರಣೆಯ ಪ್ರಕಾರ ಸ್ತ್ರೀಯರಿಗೆ ಸಂಸ್ಕಾರ ಧರ್ಮಬಾಹಿರ." ತೀಕ್ಷ್ಣವಾಗಿ ಪ್ರತಿಭಟಿಸಿದ ಬಾಲಕ : ''ನಮಗೆ ಜನ್ಮವೀವ ತಾಯಿ, ಕೈಹಿಡಿವ ಮಡದಿ, ಒಡನೆ ಹುಟ್ಟುವ ಸೋದರಿ, ಒಡಲಲ್ಲಿ ಹುಟ್ಟುವ ಮಗಳು, ಮನೆಯ ತುಂಬುವ ಸೊಸೆ–ಹೀಗೆ ಪುರುಷನ ಬಾಳಿನಲ್ಲಿ ಅವಿನಾಭಾವವಾಗಿ ನಡೆದು ಬರುವ ಸ್ತ್ರೀ ಧರ್ಮಸಂಸ್ಕಾರ ಬಾಹಿರಳೆ? ಇದನ್ನು ನಾನು ಒಪ್ಪಿಕೊಳ್ಳೆ." ಎಲ್ಲರ ಪ್ರತಿಭಟನೆ ವಾದ ವಿವಾದ ಲೆಕ್ಕಿಸದೆ ಬಸವಣ್ಣನು ತನ್ನ ನಿಲುವನ್ನು ಪ್ರತಿಪಾದಿಸಿದ.

''ಸ್ತ್ರೀ–ಪುರುಷರು ನಿಸರ್ಗದ ಎರಡು ಕಣ್ಣುಗಳು. ಈರ್ವರಲ್ಲೂ ಸಮಾನತೆ ತೋರದ, ಸಮಾಜವನ್ನು ಜಾತಿಯ ಗುಂಪುಗಳಾಗಿ ಒಡೆಯುವ ಸಮಾಜ–ಧರ್ಮ ವ್ಯವಸ್ಥೆ ನನಗೆ ಬೇಡ'' ಎಂದು, ತಂದೆ ಮಾದರಸನ ಕ್ರೋಧವನ್ನು ಲೆಕ್ಕಿಸದೆ, ತಾಯಿ ಮಾದಲಾಂಬಿಕೆಯ ಕಣ್ಣೀರ ಕಡಲನ್ನು ದಾಟಿ ಮನೆಯ ಹೊಸ್ತಿಲು ತೊರೆದ.

ನನ್ನ ಹೃದಯ ತಳಮಳಿಸಿತು. ನನಗಾಗಿ ಅಲ್ಲ ಸ್ತ್ರೀ ಕುಲದ ಸಮಾನತೆಯ ಡಿಂಡಿಮ ಬಾರಿಸಲಿಕ್ಕೆ, ಮನುಕುಲದ ಸಮತೆಯನ್ನು ಸಾರಲಿಕ್ಕೆ ಇಂಥ ದಿಟ್ಟ ಹೆಜ್ಜೆಯನಿಟ್ಟ ತಮ್ಮನನ್ನು ಅಗಲಲಾರದಾದೆ. ಯಾರೋ ದೇಹದಿಂದ ಹೃದಯವನ್ನು ದೂರ

ಒಯ್ಯುವಂತೆ ಭಾಸವಾಯ್ತು. ನನ್ನನ್ನು ನಾನೇ ನಿಗ್ರಹಿಸಿಕೊಳ್ಳಲಾರದೆ ತಾಯಿ-ತಂದೆಯರ ಮಾತನ್ನು ಮೀರಿ ತಮ್ಮನನ್ನು ಹಿಂಬಾಲಿಸಿದೆ.

ಮುಳ್ಳು-ಕಲ್ಲಿನ ಕ್ರಾಂತಿಯ ದಾರಿ ತುಳಿದ ಅವನಿಗೆ ನೆರಳಾಸರೆಯಾದೆ. ಸಾಂತ್ವನ ನೀಡಿದೆ. ನನಗೇನೋ ಅನ್ನಿಸುತ್ತಿತ್ತು ! "ಇವನು ಕೇವಲ ನನ್ನ ತಮ್ಮನೆಂಬ ವಾತ್ಸಲ್ಯ ದೃಷ್ಟಿ ಮಾತ್ರ ಸಾಲದು; ಜಗದೋದ್ಧಾರಕ ಮಣಿಹದೊಡನೆ ಮರ್ತ್ಯಕ್ಕಿಳಿದ ಮಹಂತ ನೆಂಭ ದೂರದೃಷ್ಟಿ ಬೇಕೆಂದು!" ಅಂತೂ ನನ್ನ ಆ ದೂರದೃಷ್ಟಿ ಯಶಸ್ವಿಯಾಯಿತು. ಅಪ್ರಕಟಿತವಾದ ವ್ಯಕ್ತಿತ್ವದಲ್ಲಿ ಅಡಗಿರುವ ಧೀಮಂತ ಶಕ್ತಿಯನ್ನು ಗುರುತಿಸಿ, ಗೌರವಿಸುವುದು ಕಠಿಣ. ಪ್ರಕಟಿತವಾದ ಶಕ್ತಿಯಲ್ಲಿ ಗುರುತಿಸುವುದೇನು ಕಷ್ಟ!

ಬಸವಣ್ಣನ ಸಾಧನೆ ಅಪಾರ; ಅತ್ಯುನ್ನತ ವಿಚಾರವಾದಿಯವನು. ಸಂಪ್ರದಾಯಿಕ ಸಮಾಜ ವ್ಯವಸ್ಥೆಯು ಸಮಾಜವನ್ನು ಮೇಲು-ಕೀಳೆಂದು ಶೋಷಣೆ ಮಾಡುತ್ತಿರುವಾಗ ''ಕೊಲುವವನೆ ಮಾದಿಗ, ಹೊಲಸು ತಿಂಬುವವನೆ ಹೊಲೆಯ, ಕುಲವೇನೋ ಆವಂದಿರ ಕುಲವೇನೋ'' ಎಂದು ಝಂಕಿಸಿ ಕೇಳಿ ಸಕಲ - ಜೀವಾತ್ಮರಿಗೆ ಲೇಸನ್ನು ಬಯಸುವ ಕೂಡಲ ಸಂಗನ ಶರಣನೇ ಕುಲಜನು ಎಂದು ಸಾರಿದ. ಅಂತೆಯೇ ಲೋಹ ಚುಂಬಕ ಶಕ್ತಿಯಾಗಿ ವಿವಿಧ ದೇಶ, ಭಾಷೆ, ಕಾಯಕದ ಅನಂತ ಅನರ್ಘ್ಯ ಶಕ್ತಿಗಳನ್ನು ತನ್ನ ಭಕ್ತಿ ಸೂತ್ರದಿಂದ ಬಂಧಿಸಿರುವನು. **ವಯಸ್ಸಿನಲ್ಲಿ ಕಿರಿಯನಾದರೇನಂತೆ ನನಗೂ ಗುರು ಅವನು.** ಆದ್ದರಿಂದಲೇ ನಾನು ಹೃದಯ ತುಂಬಿಬಣ್ಣಿಸುವೆ

ಎನ್ನ ಕುಲಸೂತಕವನಳಿದ ಬಸವಣ್ಣ
ಎನ್ನ ಛಲಸೂತಕವ ಕಳೆದ ಬಸವಣ್ಣ
ಎನ್ನ ತನುಸೂತಕವ ಕಳೆದ ಬಸವಣ್ಣ
ಎನ್ನ ಮನ ಸೂತಕವ ಕಳೆದ ಬಸವಣ್ಣ
ಎನ್ನ ಪ್ರಾಣ ಸೂತಕವ ಕಳೆದ ಬಸವಣ್ಣ
ಎನ್ನ ಭಾವ ಸೂತಕವ ಕಳೆದ ಬಸವಣ್ಣ
ಎನ್ನರಿವು ಮರಹಿನ ಸಂದ ಬಿಡಿಸಿದ ಬಸವಣ್ಣ
ಎನ್ನ ತನ್ನಲ್ಲಿ ಇಂಬಿಟ್ಟುಕೊಂಡ ಬಸವಣ್ಣ
ತನ್ನ ಎನ್ನಲ್ಲಿ ಇಂಬಿಟ್ಟುಕೊಂಡ ಬಸವಣ್ಣ
ನಿಜ ನಿರ್ವಯಲ ಸಮಾಧಿಯ ನಿಜವಾಸದ
ಬಾಗಿಲ ತೋರಿದ ಬಸವಣ್ಣ
ಬಸವಣ್ಣ ಪ್ರಿಯ ಚೆನ್ನಸಂಗಯ್ಯನ
ಹೃದಯ ಕಮಲದಲ್ಲಿ ಸಯವಾಗಿರಿಸಿದ ಎನ್ನ
ತಂದೆ ಸಂಗನ ಬಸವಣ್ಣನು.



ಬಸವೇಶನ ಮರ್ತ್ಯದ ಮಣಿಹ ಪೂರೈಕೆಗೆ ನನ್ನ ಪಾಲು, ನನ್ನ ಮಗ ಚನ್ನ ಬಸವನ ಪಾಲು ಸೇರಲೇಬೇಕು. ಕೂಡಲ ಸಂಗಮದ ಪತಿ ಮನೆಗೆ ನಾನು ಬಂದಾಗ, ನನ್ನ ಪತಿ ಶಿವಸ್ವಾಮಿ ಕೇವಲ ತೀರ್ಥಯಾತ್ರೆಗಳಲ್ಲೇ ತಿರುಗಿದಾಗ ನಾನು ತುಂಬು ಗರ್ಭಿಣಿ. ಅನಿತರಲ್ಲಿ ನನಗೂ ವೈರಾಗ್ಯ ಬಲಿಯಿತು. ಬಸವಣ್ಣನ ಹಿಂದೆ ಕಲ್ಯಾಣಕ್ಕೂ ಹೊರಟೆ. ಒಬ್ಬನೇ ಮುದ್ದು ಮಗನಿಗೆ ಅದಕ್ಕೆಂತಲೇ ಅಲ್ಲವೇ ಬಸವೇಶನ ಹೆಸರನ್ನು ಮತ್ತು ಅಸ್ಪೃಶ್ಯ ಕುಲದಲ್ಲಿ ಜನ್ಮಿಸಿ ಮಹಂತನಾದ ಚೆನ್ನಯ್ಯನ ಹೆಸರನ್ನೂ ಸಂಗಮಿಸಿ ಇಟ್ಟದ್ದು. ಅಂದು ಮಗನಿಗೆ ನಾಮಕರಣ ಮಾಡುವಂದು, 'ಬಸವೇಶ'ನೆಂದು ಹೆಸರಿಡಲು ನಾನು ಹಟ ತೊಟ್ಟಾಗ, ಬಸವಣ್ಣ ಒಪ್ಪದೆ, 'ಅಪ್ಪನು ನಮ್ಮ ಮಾದಾರ ಚೆನ್ನಯ್ಯ' ಕುಲದಿಂದಧಿಕ ಚೆನ್ನಯ್ಯನ ಹೆಸರಿಡಿರೆಂದು ಒತ್ತಾಯಿಸಿದ. ಇಬ್ಬರ ತೃಪ್ತಿಗೆಂದು ಚನ್ನಬಸವಣ್ಣ ಎಂದಿಟ್ಟೆವಲ್ಲವೆ? ಮಗ ಚೆನ್ನಬಸವಣ್ಣ ಅನುಭವ ಮಂಟಪದ ಉನ್ನತ ಪರಿಸರದಲ್ಲಿ ಬೆಳೆದ ಪರಿಣಾಮವಾಗಿ ''ಷಟ್ಸ್ಥಲ'' ಜ್ಞಾನಿ ಎನ್ನಿಸಿಕೊಂಡ. ಷಟಸ್ಥಲ ಚಕ್ರವರ್ತಿ ಸಮ್ಯಕ್ ಜ್ಞಾನಿ, ಕ್ರಾಂತಿಯೋಗಿಯಾದ ಜ್ಞಾನನಿಧಿ ಚನ್ನ ಬಸವಣ್ಣನು ಇಷ್ಟು ಘನ ತತ್ವವೇತ್ತನಾದುದು ಬಸವೇಶನಿಂದಲೇ ಅಲ್ಲವೇ? ಬಸವೇಶ ಮಾಡುತ್ತಿರುವ ಘನ ಮಣಿಹದಲ್ಲಿ ಪಾಲುಗಾರಳಾಗಿ ದುಡಿಯುವೆ. ಅವನ ಬಾಳಿನಲ್ಲಿ ಕ್ರಿಯಾಶಕ್ತಿಯಾಗಿ ನಿಲ್ಲುವೆ. ಈ ಕಾಯದಲ್ಲಿ ರಕ್ತದ ಬಿಂದುವೊಂದಿರುವ ತನಕ ವೀರ ಮಾತೆಯಾಗಿ ಧರ್ಮಕ್ಕೆ ಕಾದುವೆ, ಶರಣರ ಧರ್ಮ ಕೇವಲ 'ಶರಣಸತಿ'ಯರನ್ನಷ್ಟೇ ತಯಾರಿಸದು, ವೀರ ಮಾತೆಯರನ್ನೂ ತಯಾರಿಸುವುದೆಂಬುದನ್ನು ಜಗಕ್ಕೆ ತೋರುವೆ.

**ಇಚ್ಛಾಶಕ್ತಿ ಗಂಗಾಂಬಿಕೆ :**

ಎಂತಹ ಭಾಗ್ಯವಂತೆ ನಾನು; ಎಂತಹ ಪುಣ್ಯ ಜೀವಿ; ಅಪರೂಪನಾದ ಪತಿ, ಪ್ರೀತಿಯ ತವನಿಧಿಯಾದ ಅತ್ತಿಗೆ, ಜ್ಞಾನನಿಧಿಯಾದ ನೀಲಾಂಬಿಕೆ! ಪಂಕದಲ್ಲಿ ಜನ್ಮಿಸಿದರೂ ಪಂಕವನ್ನು ದಾಟಿದ ಕಮಲೆಯಂತೆ, ಸ್ತ್ರೀಯರಿಗೆ ಸಂಸ್ಕಾರವೀಯದ ಧರ್ಮದಲ್ಲಿ ಜನಿಸಿದರೂ ಬಸವೇಶನ ದಯದಿಂದ ನೂತನ ಧರ್ಮದ ಸಂಸ್ಕಾರ ಪಡೆದು ಶರಣೆಯಾಗಲಿಕ್ಕೆ ನನಗೆ ಸಾಧ್ಯವಾಯಿತು. ಎಲ್ಲೆಡೆ ಬಸವೇಶನ ಗುಣಗಾನ;

ಸಾಂದ್ರವಾಗಿ ಹರಗಣ ಭಕ್ತಿಯ ಮಾಳ್ಪನೆಂತವ್ವ
ಮಾದಲಾಂಬಿಕಾ ನಂದನನು!
ಸಾಂದ್ರವಾಗಿ ಬಿಜ್ಜಳನರಮನೆಯ ನ್ಯಾಯವ
ಮಾಳ್ಪನೆಂತವ್ವಾ ಮಾದರಸರ ಮೋಹದ ಮಗನು,
ಲಿಂಗಾರ್ಚನೆ ಲಿಂಗತೃಪ್ತಿ ಅನುಗೈವನೆಂತವ್ವ
ಗಂಗಾಪ್ರಿಯ ಕೂಡಲ ಸಂಗನ ಶರಣ.

ಬಲದೇವನ ಮಗಳಾಗಿ ಜನಿಸಿದೆ. 'ಸಂಸಾರ ನನಗೆ ಬೇಡವೇ ಬೇಡ' ಎಂದು ಹಟ

ಹಿಡಿದ ಬಸವರಾಜರಿಗೆ "ಧರ್ಮ, ದಾಸೋಹಕ್ಕಾಗಿ" ಸಂಸಾರವನ್ನು ಕಟ್ಟಿದರಲ್ಲವೆ? ಆ ತಾಯಿ; ಅಕ್ಕನಾಗಮ್ಮ ಅದೇನು ಅದಮ್ಯ ಶಕ್ತಿ! ಬಸವೇಶನ ಬೆನ್ನ ರಕ್ಷಕಿಯಾಗಿ, ಬಾಳಿನ ಕಣ್ಣಾಗಿ, ವಾತ್ಸಲ್ಯವಾರಿಧಿಯಾಗಿ, ಸ್ಫೂರ್ತಿ ಸೆಲೆಯಾಗಿ, ಮಾತೃ ವಾತ್ಸಲ್ಯದ ಮಹಾ ಸುಧೆಯಾಗಿ, ಪ್ರೇಮದ ಪರಂಜ್ಯೋತಿಯಾಗಿ, 'ಅವರ' ಧ್ಯೇಯಾದರ್ಶಗಳ ಬಗ್ಗೆ ನಿರಂತರ ಮಾರ್ಗದರ್ಶನ ಮಾಡುತ್ತಾ ಮುನ್ನಡೆದಿದ್ದಾಳೆ. ಬಸವೇಶನ ಅವತಾರದ ಉದ್ದೇಶವರಿತು ಕರ್ತವ್ಯದ ಎಚ್ಚರಿಕೆಯನ್ನೀಯುತ್ತ ಎರ್ದೆಗೆಟ್ಟಾಗ ಧೈರ್ಯ ವೀಯುತ್ತ, ಬಾಳ ಸಸಿಗೆ ನೀರೆರೆಯುತ್ತಾ ಸಂಜೀವಿನಿಯಾಗಿದ್ದಾಳೆ.

ಇನ್ನು 'ಅವರು'; ಅವರ ನಿಲುಮೆ, ಅಬ್ಬಾ! ನೆನೆಸಿಕೊಳ್ಳಲೂ ಅಶಕ್ತರು ನಾವು, ಅದೇನು ಅವರ ಔದಾರ್ಯ, ವಿನಯ, ದಾಸೋಹಂ ಭಾವ; ಅಂದು ಮದುವೆಯಾಗಲಿಕ್ಕೆಂದು ಎಲ್ಲರೂ ಒತ್ತಾಯಿಸಿದಾಗ, "ಗೃಹಸ್ಥ ಧರ್ಮಿಯಾಗಿಯೂ ಮುಕ್ತಿ ಪಡೆಯಲು ಬರುವುದೆಂಬ ಸಿದ್ಧಾಂತವನ್ನು ಜಗತ್ತಿಗಿಂದು ತೋರಲು ಅವತರಿಸಿರುವೆ ಬಸವಣ್ಣ," ಎಂದು ಜಾತವೇದ ಶ್ರೀಗಳು ಅಂದಾಗ, ನಾನು ಕಪ್ಪಡಿಗೆ ಅಪ್ಪನೊಡಗೂಡಿ ಹೋದಾಗ ಕೇಳಿದ್ದರು. "ಗಂಗಾ...." ಅವರ ದನಿಯಲ್ಲಿ ಮಾಧುರ್ಯವಿದ್ದರೂ ಸ್ಥಿರತೆಯಿತ್ತು. ಮೌನವಾಗಿ 'ಏನು' ಎಂದೆ. "ನೋಡು....ನಿನ್ನ ಸೋದರ ಮಾವನೆಂಬ ಕೇವಲ ಅಭಿಮಾನದಿಂದ ಲಗ್ನವಾಗಬೇಡ. ನನ್ನೊಡನೆ ವಿವಾಹವಾದರೆ ಅದಾವುದೋ ಲೌಕಿಕ ಸುಖ ನಿನಗೆ ಸಿಕ್ಕೀತೆಂದೂ ಭಾವಿಸಬೇಡ. ದಾಸೋಹಂ ಭಾವದಿಂದ ಶರಣರ ಸೇವೆಯನ್ನು ಮಾಡುವುದಾದರೆ, ಧರ್ಮ ಪ್ರಚಾರ ಕೈಂಕರ್ಯಕ್ಕೆ ನಿನ್ನನ್ನು ಮುಡುಪಿಡುವುದಾದರೆ ಮಾತ್ರ ವಿವಾಹವಾಗುವೆ" ಅವರ ಭವ್ಯ ವ್ಯಕ್ತಿತ್ವಕ್ಕೆ ಮಾರುಹೋಗಿ ಒಪ್ಪಿದೆ. ಆದರಿಂದು ಅದರ ಸತ್ಫಲ ಕಾಣುತ್ತಿರುವೆ; ಶರಣರ ಸೇವೆಯಲ್ಲಿ ಧನ್ಯಳಾಗಿರುವೆ. ಸ್ವಯಂಜ್ಯೋತಿಯಾಗಿ ಅವರಂತೆ ಉರಿಯುವ ಸಾಮರ್ಥ್ಯ ನನ್ನದಲ್ಲವಾದರೂ ಬಸವ ಜ್ಯೋತಿಯ ಪ್ರಕಾಶದಲ್ಲಿ ನಾನು ಬತ್ತಿಯಾಗುವೆ.

## ಜ್ಞಾನಶಕ್ತಿ ನೀಲಾಂಬಿಕೆ :

ನನ್ನ ಜೀವನವೊಂದು ಪವಾಡವೇ....ಹುಟ್ಟಿದ್ದೆಲ್ಲಿ, ಬೆಳೆದಿದ್ದೆಲ್ಲಿ, ಕಮ್ಮೆ ಕುಲದ ಬ್ರಾಹ್ಮಣ ಸಿದ್ಧರಸರ ಮಗಳಾಗಿ ಜನಿಸಿದೆ. ಮಲ್ಲಿಗೆ ಹೂವಿನಂತೆ ಜೋಪಾನ ಮಾಡಿದ ಅರಸು ಮನೆತನದಲ್ಲಿ ಬೆಳೆದೆ, ಕಾಯಕ ಜೀವಿ ಇವರನ್ನು ಕೂಡಿದೆ. ಅಂದು ....ನೆನೆಸಿಕೊಂಡರೆ ಕೆನ್ನೆ ಕೆಂಪಾಗುತ್ತದೆ. ಗಂಗಾ, ನಾನು, ಕೆಳದಿಯರು ಕೂಡಿ ಕಪ್ಪಡಿಗೆ ವಿಹಾರಕ್ಕಾಗಿ ಸಾಗಿದ್ದೆವಲ್ಲವೆ? ಬೊಪ್ಪನಾದ ಮಂತ್ರಿ ಬಲದೇವರಸನು ವರಾನ್ವೇಷಣೆಯಲ್ಲಿ ತೊಡಗಿದ್ದರು. ನಮಗೆ ಆ ಚಿಂತೆಯಿಲ್ಲ: ಅಂದು ಹೋದ ಕೂಡಲೇ ಜಾತವೇದ ಮುನಿಗಳ ದರ್ಶನ ತೆಗೆದುಕೊಂಡೆವು. ಆ ಸನ್ಯಾಸಿಗಳ ಬಳಿ ನಮಗೇನು ಕೆಲಸ, ಅಲ್ಲದೆ ಅದಾರೋ ವಟುವನ್ನು ಕುರಿತು ಅವರಿಬ್ಬರೂ ರಹಸ್ಯಾಲೋಚನೆ ಮಾಡುವುದಿತ್ತಂತೆ!



ಸದ್ಯ ನಮಗೂ ಅದೇ ಬೇಕಿತ್ತು. ಹೊರಗೆ ಜಿಂಕೆಗಳಂತೆ ಓಡಿದೆವು. ಅಲ್ಲಿ ನವಿಲುಗಳಂತೆ ನಲಿದಾಡಿದೆವು, ಕೋಗಿಲೆಗಳಂತೆ ಹಾಡಿದೆವು. ನದಿಯ ತೀರದಲ್ಲಿ ಕುಣಿದಾಡಿದೆವು. ಸೂರ್ಯೋದಯವಾಗುತ್ತಿದೆ; ಕೆಂಪು ಛಾಯೆ ದಿಕ್‌ದಿಗಂತಗಳನ್ನೆಲ್ಲಾ ವ್ಯಾಪಿಸುತ್ತಿದೆ. ಆಗ ನದೀ ತೀರದ ಶಿಲಾಮಂಟಪದಲ್ಲಿ ಒಂದು ಶಿಲಾಮೂರ್ತಿ; ಅಲ್ಲಲ್ಲ ಶಿಲೆಯಂತೆ ಧ್ಯಾನದಲ್ಲಿ ಕುಳ್ಳಿರ್ದ ಮೂರ್ತಿ. ಗಂಗಾಂಬೆ ಭಾವಜೀವಿ; ದೂರದಿಂದ ಕಂಡು ತನ್ಮಯಳಾಗಿ ತಾನೂ ಧ್ಯಾನೋನ್ಮುಖಳಾದಳು. ನನಗೊ ತಡೆಯಲಾರದಷ್ಟು ಆನಂದ; ಆನಂದದಿಂದ ಹಾಡ ತೊಡಗಿದೆ. (ಗಂಗಾಂಬೆಯ ಗಾನ, ನನ್ನ ನರ್ತನ ಪ್ರಸಿದ್ಧವಾಗಿದ್ದವು). ಅದಾರೋ ಬಾಲಕನ ದನಿ ಕೇಳಿ ಎಚ್ಚೆತ್ತೆ. "ಬಸವೇಶ.... ಗುರುಗಳು ಕರೆಯುತ್ತಿದ್ದಾರೆ" ಎಂದು ಬಾಲಕನೊಬ್ಬ ನುಡಿಯುತ್ತಿದ್ದ. "ಏಕಂತೆ...." ಪ್ರಶ್ನಿಸಿದ ಆ ಯುವಕ; ಅಬ್ಬಾ! ಮಿಂಚು ಮಿಂಚಿದಂತಾಯಿತೆನಗೆ. ಅದೇನು ಆ ಭವ್ಯ ಮೂರ್ತಿ, ವಿಶಾಲ ಎದೆ: ಜಗವನ್ನೇ ಇಂಬಿಕ್ಕಿಕೊಳ್ಳುವ ಹಾರ್ದಿಕತೆ, ಯೋಗ ನೇತ್ರ, ವಿಶಾಲ ಲಲಾಟ. ಹಣೆಯ ಮೇಲೆ ಸಾತ್ವಿಕ ತೇಜವಿತ್ತ ಭಸಿತ. ವಿವಿಧ ಭಾವನೆಗಳು ಸಾಗರದ ಅಲೆಗಳಂತೆ ಮೂಡಿ ಮರೆಯಾದವು. "ಮಹಾಮಂತ್ರಿ ಬಲದೇವರಸರು, ತಮ್ಮ ಸೋದರ ಮಾವಂದಿರು ಬಂದಿರುವರಷ್ಟೇ. ಅದಕ್ಕೇ ಗುರುಗಳು ಕರೆಯುತ್ತಿದ್ದಾರೆ....ಪರಿಚಯ ಮಾಡಿಕೊಡಲು." ಆ ಬಾಲಕನೆಂದ.

"ಗಂಗಾಂಬೆಯ ಸೋದರ ಮಾವ....ಇವರ ಅನ್ವೇಷಣೆಗೇ ಈಗ ನಾವುಗಳಿಲ್ಲಿ ಬಂದಿದ್ದು. ಇಷ್ಟು ಸುಂದರ, ಸೌಮ್ಯವಂತ ಗಂಗಾಂಬೆಯ ಸೊತ್ತಾ....ಗಲಿರುವನೇ?" ಏಕೋ ಅಸೂಯೆ ಎನ್ನಿಸಿತು, ಹೊಟ್ಟೆಯೊಳಗೆ ಹಾವು ಹರಿದಂತಾಯಿತು. ಗಂಗಾಂಬೆಯನ್ನು ನೋಡಿದೆ. ಇನ್ನೂ ಹಾಡುತ್ತಲೇ ಕುಳಿತಿರುವಳಾಕೆ. ಅತಿ ಮುಗ್ಧ ಜೀವಿ, ಆವ ಕಲ್ಮಶವನ್ನೂ ಅರಿಯದ ವ್ಯಕ್ತಿ ಗಂಗಾಂಬೆ, ಹಾಡುವುದನ್ನು ಕೇಳಿ ಒಂದು ಚಣ ನಿಂತ ಬಸವೇಶ ಸಮೀಪ ಸಾರಿರ್ದ; ನಮ್ಮನ್ನು ದಾಟಿಯೇ ಆಶ್ರಮಕ್ಕೆ ಹೋಗಬೇಕಾಗಿತ್ತು, ಮೈಮರೆತು ನಿಂತ ನಮ್ಮ ಸಮೀಪದಲ್ಲೇ ಹಾಯ್ದು ಹೋದಾಗ ಮಿಂಚಿನ ಸಂಚಾರ ನನ್ನೊಳಗೆ. ಗಂಗಾಂಬೆಯನ್ನು ನೋಡಿ ಮತ್ತೂ ಅಸೂಯೆಯಾಯಿತು.

ಅವರ ವಿವಾಹದ ನಿರ್ಧಾರವೆಲ್ಲ ಮುಗಿಯಿತು. ನನ್ನಲ್ಲಿ ಮೂಡಿದ ಬಯಕೆ ಅಳಿಯಲಿಲ್ಲ; ನನಗರಿಯದಂತೆ ಅಂತರಂಗದಲ್ಲಿ ಒಂದಕ್ಕೆ ನೂರಾಗಿ ಬೇರು ಬಿಟ್ಟು ಹರಡಿತು. ವಿವಿಧ ರೂಪ ಧರಿಸಿ ಅಜಾಗೃತ ಮನದಲ್ಲಿ ಕಾಡತೊಡಗಿತು. ಆರೋಗ್ಯ ಕುಂದಿ, ತನುಕೃಶವಾದಾಗ ಗಂಗಾಂಬೆ ಚಿಂತಿಸಿದಳು. ಒತ್ತಾಯಿಸಿ ಏಕೆಂದಾಗ ಲಜ್ಜೆಯಿಂದ ಮೌನವಾಂತೆ; 'ಶಿವನಾಣೆ, ನನ್ನಾಣೆಯೆಂದಾಗ' ಹೇಳಬೇಕಾಯಿತು. ಮನವಾರೆ ನಕ್ಕಳು. "ನೀಲಾ....ಬಸವೇಶನಿಗಾಗಿ ಚಿಂತಿಸಿದೆಯಾ? ಮೊದಲೇ ಹೇಳಬಾರದೆ?"

"ನಮ್ಮಿಬ್ಬರ ದೇಹವೆರಡು ಚೇತನವೊಂದು. ನನ್ನಲ್ಲಿ ಮುಚ್ಚು ಮರೆಮಾಡಿದೆ ಏಕೆ...? ನನ್ನ ಪತಿದೇವರ ಹೃದಯ ಸಂಪತ್ತಿನಲ್ಲಿ ನಿನಗೆ ಧಾರೆಯೆರೆಯಲು ಸದಾ ಸಿದ್ಧ....!" ಹಾಂ.... ಅದಾವುದರ ಸಲುವಾಗಿ ಗಂಗಾಂಬೆಯನ್ನು ಕುರಿತು ಅಸೂಯೆ ತಾಳಿದ್ದೆನೋ ಅದನ್ನು ಅವಳೇ ತ್ಯಾಗ ಮಾಡಲು ಸಿದ್ಧಳಿದ್ದಾಳೆ. ನಾಚಿ ನೀರಾದೆ.

'ಆದರೆ....ನೀಲಾ....ಅವರಿಂದ ದಾಂಪತ್ಯ ಸುಖ ಸಿಗುವುದು ಕಠಿಣವಿದೆ. ಸಂಸಾರದಲ್ಲಿದ್ದ ವಿರಕ್ತರವರು....'

"ಗಂಗಾ....ಅವರ ಸಾಮೀಪ್ಯವಿದ್ದರೆ ಸಾಕು....ಅದನ್ನೊದಗಿಸಿಕೊಟ್ಟರೆ ನಿನ್ನುಪಕಾರ ಎಂದೂ ಮರೆಯೋಲ್ಲ...."

"ಹಾಂ.... ಸಾಕು.... ಸದ್ಯ ಸವತಿ ಮತ್ಸರ ಮಾಡದಿದ್ದರೆ ಪುಣ್ಯ." ನಕ್ಕು ನುಡಿದಿದ್ದಳು. ಒತ್ತಾಯ ಮಾಡಿ ಬಸವೇಶನನ್ನು ಒಪ್ಪಿಸಿದಳು. ಲಗ್ನವಾಯಿತು. ಆದರೇನು, ಸತಿ-ಪತಿಯರ ಸಂಬಂಧ ಅವರು ನಿರಾಕರಿಸಿದರು. ವಿವಾಹವಾಗಿ ಕೆಲವೇ ದಿನಗಳಾದರೂ ಸತಿ-ಪತಿಗಳಾಗಿದ್ದೆವೋ ಇಲ್ಲವೋ; ರಸಿಕ ಶಿಖಾಮಣಿಯಾದ ನನ್ನಲ್ಲಿದ್ದ ವಿಷಯದ ಜಾಲವನ್ನು ಎಳೆ ಸಮೇತ ಕಿತ್ತುಹಾಕಿದರು. ವಿಲಾಸ ವೈಭೋಗದ ಭ್ರಮೆ ಬಿಡಿಸಿದರು; "ನೀಲಾ ಎಲ್ಲರಂತೆ ನಾವೂ ಬಾಳಿದರೇನು; ಒಂದು ಗಂಡು ಹೆಣ್ಣಿನ ಸಂಬಂಧವೆಂದರೆ ದೈಹಿಕ, ಕಾಮ ಸಂಬಂಧವೇ ಇರಬೇಕೆ? ಅದನ್ನು ಬಿಟ್ಟು ಕೇವಲ ಹಾರ್ದಿಕ ನಿಷ್ಕಲ್ಮಶ ಪ್ರೇಮದಲ್ಲೇ ಬಾಳಬಾರದೇನು?"

"ಹಾಗಾದರೆ ವಿವಾಹ ಏಕಾಗಬೇಕು....?" ಮುನಿಸಿನಿಂದ ನಾ ಕೇಳಿದ್ದೆ.

"ಯಾರು.... ಉಪವಾಸ-ವನವಾಸ ಮಾಡಿ, ಕಾಯಿಲೆ ಬಿದ್ದು ಲಗ್ನವಾದವರು?" ನಕ್ಕು ಕೇಳಿದರು ಅವರು. "ನೋಡು....ನೀಲಾ....ಹೆಣ್ಣಿಲ್ಲದೆ ವಿರಕ್ತನಾಗಿರುವುದಕ್ಕಿಂತ ಹೆಂಡತಿ ಇದ್ದು, ಅದರಲ್ಲೂ ಪೃಥ್ವಿಗೆ ಅಗ್ಗಳ ಚೆಲುವೆ ನೀಲಲೋಚನೆಯಂತಹವಳಿದ್ದೂ ಸಂಯಮಿಯಾಗಿರುವುದು ಹೆಚ್ಚಿನದಲ್ಲವೆ? ಇಂದ್ರಿಯ ಶಕ್ತಿ ಉಡುಗಿದ ಮೇಲೆ ಎಲ್ಲರೂ ವಿರಕ್ತರೆ! ಇಂದ್ರಿಯದ ಹಯಗಳು ಮದವೇರಿ ನುಗ್ಗುವಾಗ, ನಿನ್ನಂತಹ ಸುಂದರಿ ಇರುವಾಗಲೂ ಕರಣಗಳ ಮೇಲೆ ಕಲಿತನವಿದ್ದರೆ ಆಗ ನಾನು ಧೀರ. ಹೆಣ್ಣು ಗಂಡಿನ ತಾಯಾಗಬೇಕು; ಗಂಡು ಹೆಣ್ಣಿನ ತಂದೆಯಾಗಬೇಕು. ಅದು ನೋಡು ಅಪ್ರತಿಮ ಸಾಧನೆ...." ಒಪ್ಪಿದೆ ನಾನು. ಅಂದಿನಿಂದ ನಾವು ಹೆಣ್ಣು-ಗಂಡೆಂಬ ಭೇದವಳಿದು ಬದುಕಿದೆವು;

ಮಡದಿ ಎನ್ನಲಾಗದು ಬಸವಂಗೆ ಎನ್ನನು
ಪುರುಷನೆನಲಾಗದು ಬಸವನ ಎನಗೆ
ಉಭಯ ಕುಳವ ಹರಿದು ಬಸವಂಗೆ ಶಿಶುವಾನಾದೆನು



**ಬಸವನೆನ್ನ ಶಿಶುವಾದನು.**
ಪ್ರಮಥರು ಪುರಾತರು ಸಾಕ್ಷಿಯಾಗಿ
ಸಂಗಯ್ಯನಿಕ್ಕಿದ ದಿಬ್ಯವ ಮೀರದೆ ಬಸವನೊಳಗಾನಡಗಿದೆ.

ಬಸವೇಶ, ಬಸವರಾಜ, ನಿನ್ನ ಕರುಣೆಯಿಂದ ನಾನೂ ವಿರಕ್ತಳಾದೆ; ಪರಮ ವಿರಕ್ತಳಾದೆ! ಪತಿಯನ್ನು, ಗುರುವನ್ನು, ಪುತ್ರನನ್ನು, ಸಖನನ್ನು, ನನ್ನ ಬಾಳ ಬೆಳಗನ್ನೂ ನಿನ್ನಲ್ಲೇ ಕಂಡು ಧನ್ಯಳಾದೆ.

**ಮಹಾಗುರು ಬಸವಣ್ಣ :**

ನನ್ನ ಬಾಳು ಅದ್ಭುತ ಘಟನೆಗಳ ಚಿತ್ರಣ. 'ಉಡು'ವಿನ ಪರಿಯಲ್ಲಿ ಹಡೆದು ಕೈಬಿಟ್ಟರೆನ್ನವರು. ಅಂಧವಿಚಾರಗಳನ್ನು ಪ್ರತಿಭಟಿಸಿದಾಗ ಮಾದಿರಾಜ, ಮಾದಲಾಂಬೆಯರು ತಿರಸ್ಕರಿಸಿದರು. ಆದದ್ದೆಲ್ಲ ಒಳ್ಳಿತಿಗೇ. ಪಂಜರದ ಪಕ್ಷಿಯಾಗಿ ಯಾವೊಂದು ಸಂಪ್ರದಾಯಕ್ಕೆ ಬಲಿಬೀಳದೆ ಗೂಡಿನ ಪಕ್ಷಿಯಂತೆ ವಿಚಾರ ಗಗನದಲ್ಲಿ ಸ್ವಚ್ಛಂದವಾಗಿ ವಿಹರಿಸಲು ಅನುವಾಯಿತು. ಜಾತವೇದ ಗುರುಗಳ ಕೃಪೆಯಲ್ಲಿ, ಸಾತ್ವಿಕ ವಾತಾವರಣದಲ್ಲಿ ಬೆಳೆದೆ. ವಿರಕ್ತನಾಗಿ, ಸನ್ಯಾಸಿಯಾಗಿ ಬಾಳ ಸವೆಸುವ ಬಯಕೆ ನನ್ನಲ್ಲಿತ್ತು. ಆದರೆ ಗುರುಗಳ ದಿಗ್ದರ್ಶನ ಬೇರೆಡೆಗಿತ್ತು. ಕೇವಲ ಕೆಲವರ ಸ್ವತ್ತಾಗಬಲ್ಲ ಕತ್ತಿಯ ಮೊನೆಯ ಮೇಲೆ ನಡೆದಂತಹ ಕಠಿಣತಮ ವೈರಾಗ್ಯ ಮಾರ್ಗಕ್ಕಿಂತಲೂ, ಶ್ರೀ ಸಾಮಾನ್ಯನೂ ಆಚರಿಸಬಲ್ಲ ಉಂಡು ಉಪವಾಸಿಯಾಗಿ, ಕೊಂಡು ಬ್ರಹ್ಮಚಾರಿಯಾಗುವ ಸಂಸಾರವನ್ನೇ ಸದ್ಗತಿಯ ಸಾಧನವನ್ನಾಗಿಸುವ ಸರಳ ಧರ್ಮವನ್ನು ಸಂಸ್ಥಾಪಿಸುವ ಬಯಕೆ ನನ್ನಲ್ಲಿ ತುಂಬಿದರು. ಆ ಬಯಕೆಗೆ ದೊರೆತರು ನನ್ನ ಜೀವನದಲ್ಲಿ-ಇಚ್ಛಾಶಕ್ತಿ, ಮತ್ತು ಜ್ಞಾನಶಕ್ತಿಯರು! ಅಕ್ಕ ನಾಗಲಾಂಬೆ ನನ್ನ ಕ್ರಿಯಾಶಕ್ತಿ. ಮರ್ತ್ಯದ ನನ್ನ ಮಣಿಹವನ್ನರಿತು, ಧ್ಯೇಯಾದರ್ಶಗಳನ್ನರಿತು, ಮಹಾಮನೆಯ ಸಮಸ್ತ ಜವಾಬ್ದಾರಿಯನ್ನು, ದಾಸೋಹ ಕಾರ್ಯವನ್ನು ಕುಂದಾಗದ ರೀತಿಯಲ್ಲಿ ನಡೆಸುತ್ತಿದ್ದಾಳೆ. ಎಲ್ಲರೂ ನನ್ನನ್ನು ಕೈಬಿಟ್ಟಾಗಲೂ, ಅಷ್ಟೇ ಸ್ಥಿರಳಾಗಿ ಕಾಯವನ್ನು ನೆರಳು ಹಿಂಬಾಲಿಸುವಂತೆ ಸೋದರನ ಬಾಳಿನಲ್ಲಿ ಸರ್ವ ಸಮರಸಳಾಗಿದ್ದಾಳೆ. ಒಡಹುಟ್ಟಿದ ಸೋದರಿ, ವಾತ್ಸಲ್ಯದಲ್ಲಿ ಮಾತೆ, ಮಾರ್ಗ ದರ್ಶನದಲ್ಲಿ ಗುರು, ಲಾಲಿಸಿ ಪಾಲಿಸಿ ನನ್ನನ್ನು ರೂಪಿಸಿ ಜಗಕ್ಕಿತ್ತ ಧೀರಮಾತೆ. ಅನುಭವ ಮಂಟಪಕ್ಕೆ ಬಂದ ಮಹಾದೇವಿಯಕ್ಕ, ಸತ್ಯಕ್ಕ ಇತ್ಯಾದಿ ಶರಣೆಯರನ್ನೆಲ್ಲಾ ಪ್ರೇಮ ಸೌಹಾರ್ದತೆಯಿಂದ ಸ್ವಾಗತಿಸಿ ಇಂಬಿಕ್ಕಿಕೊಂಡ ಜಗದಗಲದ ಹೃದಯದ ಅಮರ ಕರ್ತೃ ಶಕ್ತಿ ಈಕೆ; ಬಸವನ ಬಾಳಿನ ಅದಮ್ಯ ಕ್ರಿಯಾಶಕ್ತಿ.

ಬಾಳನ್ನು ಇಂತಹ ಭದ್ರ ಬುನಾದಿಯ ಮೇಲೆ ನಿಲ್ಲಿಸಲು ಸಾಧ್ಯಳಾದ ಪತ್ನಿ ಗಂಗಾಂಬಿಕೆ-ಇಚ್ಛಾಶಕ್ತಿಯಾಕೆ. ಅತ್ಯಂತ ಮುಗ್ಧ ಜೀವಿ. ಪತಿಯ ಪ್ರೇಮದಲ್ಲಿ

ಪಾಲು ಕೊಡಲಾಗದೆ ಮಾತ್ಸರ್ಯ ತೋರುವ ಹೆಣ್ಣು ಕುಲಕ್ಕೆ ಹೊರತು ಈಕೆ. ತಾನಾಗಿ ಅತ್ಯಾನಂದದಿಂದ ನೀಲಾಂಬಿಕೆಯನ್ನು ವಿವಾಹ ಮಾಡಿದಳು; ಆಕೆಯ ಈ ತ್ಯಾಗದಿಂದಲೇ ಪತಿ ಪ್ರೇಮವನ್ನು ನೂರ್ಮಡಿಸಿಕೊಂಡಳು. ನಿಷ್ಕಲ್ಮಶ, ನಿಸ್ವಾರ್ಥ ಹೃದಯಿ. ಅವರ ತಂದೆಯ ಆಸ್ತಿ ಅಪಾರವಾಗಿ ಅಳಿಯನಾದ ನನಗೆ ಬಂದಾಗ, ನಾನದನ್ನು ಸತ್ಯಶುದ್ಧ ಕಾಯಕದಿಂದ ಬಂದುದಲ್ಲವೆಂದು ತಿರಸ್ಕರಿಸಿದೆ. ಗಂಗಾಂಬೆ ಒಪ್ಪಿ "ದುಡಿಯದೆ ನಮಗೆ ಬಂದುದು ಸಮಾಜದ ಸೊಮ್ಮದೆಂದು" ಎಲ್ಲವನ್ನು ದಾನ ಮಾಡಿ, ನಾನು ಕರಣಿಕನಾಗಿ ದುಡಿದಾಗ ತಾನೂ ಅಷ್ಟೇ ಸರಳವೃತ್ತಿಯಿಂದಿದ್ದಳು; ಹೀಗೆ ನನ್ನ ಆದರ್ಶ ಇಚ್ಛೆಗೆ ಊರುಗೋಲಾದ ಇಚ್ಛಾಶಕ್ತಿ.

ಬಾಳಿನ ಭವ್ಯದೇವಿ ನೀಲಾಂಬಿಕೆ. ಆಕೆಯೊಡನೆ ವಿವಾಹವನ್ನು ಬೇಡವೆಂದೆ; ಅರಮನೆಯ ವಾತಾವರಣದಲ್ಲಿ ಬೆಳೆದ ಸಿರಿಗುವರಿ, ವಿಲಾಸ ವೃತ್ತಿಯ ರಸಿಕಳು ನನ್ನ ವೈರಾಗ್ಯ ಜೀವನಕ್ಕೆ ಹೊಂದಿಕೊಳ್ಳಲು ಸಾಧ್ಯವೇ ಎಂಬ ಸಂಶಯದಿಂದ! ಆದರೇನು? ನನ್ನ ಪ್ರೇಮವೇ ಬಾಳ ಉಸಿರಾದ ನೀಲಾ ಅಷ್ಟೇ ವೀರಾಗಿಣಿಯಾದಳು. ಪೃಥ್ವಿಗೆ ಅಗ್ಗಳ ಚೆಲುವೆ ನೀಲಲೋಚನೆ; ಆದರೇನು ಆಕೆಯ ಸೌಂದರ್ಯ ನನ್ನ ಬಾಳಿನ ಮಾದಕ ಶಕ್ತಿಯಾಗಲಿಲ್ಲ, ಮೋದಕ ಶಕ್ತಿಯಾಯಿತು; ಕಾಮವನ್ನು ಕೆರಳಿಸುವ ಸಾಧನವಾಗಲಿಲ್ಲ, ಪ್ರೇಮವನ್ನರಳಿಸುವ ಸಾಧನವಾಯಿತು. ಅಪ್ರತಿಮ ಮಾತೃವಾತ್ಸಲ್ಯವನ್ನುಂಡೆ ನೀಲಾಂಬಿಕೆಯಿಂದ; ಜೀವನದಲ್ಲಿ ಜ್ಞಾನ ಶಕ್ತಿಯಾದಳು ನೀಲಾ. ತಪ್ಪಿದಲ್ಲಿ ತಿದ್ದುವ, ಎಚ್ಚರಿಸುವ ಧೀರ ಪತ್ನಿ ಈಕೆ. ಸಲಹೆ–ಸಹಾಯಗಳನ್ನೀಯುವ ಜ್ಞಾನ ನಿಧಿ. ಅಂತೂ ನನ್ನ ಬಾಳು ಬಿಲ್ವದಂತೆ; ಕ್ರಿಯಾಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿಯರೆಂಬ ತ್ರಿದಳದಲ್ಲಿ ಹರಿದ ಕಡ್ಡಿ; ಶಿವಪ್ರಸಾದವಾದ ಸದ್ಬಾಳು ಧನ್ಯವಾಯಿತು. ಕೂಡಲ ಸಂಗಮದೇವಾ!

ಬಸವಣ್ಣ :

'ಬಸವ' ನೆಂಬಾ ಹೆಸರು ಭಕ್ತಿಗೆ ಉಸಿರು
ಸೂಸಿಬಂದಿತು ತೊಳೆಯಲು ಜಾತಿಯ ಕೆಸರು
ಭುವಿಯ ಕಲ್ಯಾಣವು ಕೈಲಾಸವಾಯ್ತು
ಜೀವಭಾವದಲಿ ಓಂಕಾರ ತುಂಬಿ ನಿಂತು.

ನೀಲಮ್ಮ :

ನಿಜ ಭಕ್ತಿ ನೀಲಮ್ಮ ನಿನಗಾರು ಸರಿಯಮ್ಮ
'ಅಲ್ಲಿರುವ ಸಂಗ ಎಲ್ಲೆಲ್ಲೂ ಇರುವ' ನಮ್ಮ
ಅಣ್ಣ ತೊರೆದನೆಂದು ನೀನಳುಕದಿರಮ್ಮ
ನಿನ್ನ ಕಣ್ಣಾಲಿಯಲ್ಲಿ ತುಂಬಿ ತುಳುಕುವನಮ್ಮಾ

ನಿಗಡಿ ಸಂಗನ ಬಸವ



# ಅನ್ವೇಷಣೆ - ಅರಿವು - ಅನುಭಾವ

ಜಗ ಜಿಗಿಯುವ ಮುನ್ನ ನೀನಿದ್ದೆಯಂತೆ ಇಲ್ಲದಂತೆ
ನೀನಿದ್ದೆಯೋ, ಇಲ್ಲವೋ ಅದು ನನಗೆ ತಿಳಿಯದ ವಿಷಯ
ಅರಿಯದ ವಿಷಯ !!

ಅರಿತವರು ಹೇಳಿದರು ಅಂದು ನೀನಿದ್ದೆಯೆಂದು; ಮತ್ತೆ
ಇಂದೂ–ಮುಂದೂ ಇರುವೆಯೆಂದು !

ಏನೋ ಕಾತರ ನಿನ್ನ ಕಾಣಲು; ಆತುರ ಅರಿಯಲು
ಅದಕ್ಕಾಗಿ ನೋಡ ಹೊರಟೆ, ಹುಡುಕುತ ಹೊರಟೆ
ಮೊದಲು ಎಲ್ಲೆಲ್ಲೋ ಹುಡುಕಿ ನೋಡಿದೆ ಕಣ್ಣಲ್ಲಿ ಕಣ್ಣಿಟ್ಟು
ಕಂಡಿತು ಏನೇನೋ ! ಆದರೆ ಬೇಕಾದ್ದು ಕಾಣಲಿಲ್ಲ,
ಬಯಸಿದ್ದು ಸಿಗಲಿಲ್ಲ !!

ಅನುಭಾವಿಗಳು ಅರುಹಿದರು ಹೊರಗೆ ಹುಡುಕದೆ ಒಳಗೆ ಹುಡುಕೆಂದು
ಒಳಗೆ ಹೋಗಲು ಕಗ್ಗತ್ತಲೆಯ ಕಂದರ—ದುರ್ನಾತ ಮಂದಿರ
ಹಣತೆ ಹಿಡಿದು ನಡೆದೆ ಒಳಗೆ ಅಪಾರ ಕತ್ತಲಲ್ಲೂ,
ಹಣತೆ ಮಂಕಾಯಿತು, ದಾರಿ ಕಾಣದಾಯಿತು !
ಬ್ಯಾಟರಿ ಹಾಕಿ ಒಳಗೆ ನಡೆದೆ, ಸ್ವಲ್ಪ ಸ್ವಲ್ಪ ದಾರಿ ಸಾಗಿತು.
ಆದರೂ ಬೇಕಾದ್ದು ಕಾಣಲಿಲ್ಲ, ಬಯಸಿದ್ದು ಸಿಗಲಿಲ್ಲ !!
ಏನಾಯಿತೋ ಏನೋ ತಟ್ಟನೆ ಬ್ಯಾಟರಿಯ ಬೆಳಕು ನಿಂತಿತು
ಕಾರ್ಗತ್ತಲೆ ತುಂಬಿತು; ಕೂಡಲೆ ಭಯವಾಯ್ತು,
ಬಳಿಕ ಸರಿಯಾಯ್ತು; ಸೋಲದ ಕತ್ತಲೆಯಲ್ಲೂ ಅರಿವಿನ ಬೆಳಕು
ಮಿನುಗಿತು !

ಅರಿವು ಮಿನುಗಿ ಹೊಳೆದಾಗ ನೆನ್ನ ಪಾ ಮರೆತಿದ್ದೆ–ನಿನ್ನ ನಾ ಅರಿತಿದ್ದೆ ।
ನನ್ನ ನಾ ಮರೆತಿದ್ದೆ ಕಾರಣ ನಾನು ನಾನಾಗಿರಲಿಲ್ಲ ।
ನಾನು ನೀನಾಗಿದ್ದೆ, ನೀನು ನಾನಾಗಿದ್ದೆ ವೀರಭದ್ರೇಶ್ವರ ॥

—ಹೆಚ್. ವೀರಭದ್ರಾರಾಧ್ಯ.

# ಕಿಶೋರ ಕುಂಜ

## ಮಹಾಗುರು ಬಸವಣ್ಣ

ಮಮತೆಯ ಮಕ್ಕಳೆ,

ಮೇ ತಿಂಗಳು ಕಲ್ಯಾಣ ಕಿರಣದ ಹುಟ್ಟು ಹಬ್ಬ. ಇಲ್ಲಿಂದ ಅದರ ಹೊಸ ವರ್ಷದ ಆರಂಭ. ವೈಶಾಖ ಮಾಸದ ಅಕ್ಷಯ ತೃತೀಯ ಒಂದು ನೂತನ ಶಕೆಯನ್ನು ಪ್ರಾರಂಭಿಸಿತು, ಮಹಾಗುರು ಬಸವೇಶನ ನಾಮಾಂಕಿತದಲ್ಲಿ. ಈ ತಿಂಗಳ ೯ನೆಯ ದಿನಾಂಕದಂದು ಬರಲಿರುವ "ಬಸವ ಜಯಂತಿ" ಗಾಗಿ ನಿಮಗೆ ಸರಳ ಮತ್ತು ಸಂಕ್ಷಿಪ್ತವಾಗಿ ಬಸವಣ್ಣನವರ ಪರಿಚಯ ಮಾಡಿಕೊಡುವೆ ಕೇಳಿ.

ಇಂಗಳೇಶ್ವರ ಬಾಗೇವಾಡಿ ಹನ್ನೆರಡನೆಯ ಶತಮಾನದಲ್ಲಿ ಕೀರ್ತಿವೆತ್ತ ನಾಡು, ವಿದ್ಯೆ-ಸಂಸ್ಕೃತಿಗಳ ದಿವ್ಯ ಆಗರ. ಬಾಗೆವಾಡಿಯಲ್ಲಿ ವೇದಾಗಮ ಪುರಾಣ ಶಾಸ್ತ್ರ ಪಾರಂಗತರಾದ ಪಂಡಿತರ ನೆಲೆಬೀಡು ಅಗ್ರಹಾರ. ಅದರ ಮುಖ್ಯಸ್ಥ ಕಮ್ಮೆಕುಲದ ಬ್ರಾಹ್ಮಣಾಧಿಪ ಮಾದರಸ. ಅವನಿಗೆ ಮಾದಲಾಂಬೆ ಎನ್ನುವ ಗುಣವಂತ ಪತ್ನಿ ನಾಗಲಾಂಬಿಕೆ ಎಂಬ ಓರ್ವಳೇ ಪುತ್ರಿ. ತನ್ನ ವಂಶದ ವೃತ್ತಿ ಪೌರೋಹಿತ್ಯವನ್ನು ಮತ್ತು ನ್ಯಾಯ ವಿತರಣೆಯ ಕಾರ್ಯವನ್ನು ಮಾಡಬಲ್ಲ ಪುತ್ರನ ಕೊರತೆ ಅವರನ್ನು ದುಃಖಿಗಳನ್ನಾಗಿರಿಸಿತ್ತು. ಪುತ್ರನನ್ನು ಬಯಸಿ ನಂದಿ ವ್ರತವನ್ನು ಕೈಗೊಂಡಳು ಮಾದಲಾಂಬಿಕೆ. ಸಂಕಲ್ಪ ಈಡೇರಿ, ಅಕ್ಷಯ ತೃತೀಯದಂದು ೧೧೦೬ ರಲ್ಲಿ ಬಸವಣ್ಣನ ಜನನವಾಯಿತು. ಸಾಕ್ಷಾತ್ ಗುರುಗಳೇ ಆಗಮಿಸಿ ಮಗುವನ್ನು ಆಶೀರ್ವದಿಸಿ ಹೋದರು. ಇವನು ಕೀರ್ತಿಶಾಲಿ ಯುಗಪುರುಷನಾಗುವನೆಂದು ತಿಳಿಸಿದರು. ಬಿದಿಗೆ ಚಂದ್ರನಂತೆ ಬೆಳೆದ ಬಾಲಕನಲ್ಲಿ ಮೊದಲಿನಿಂದಲೂ ಸ್ವತಂತ್ರ ವಿಚಾರಶಕ್ತಿ, ಸತ್ಯವನ್ನೇ ದೃಢವಾಗಿ ಹಿಡಿಯುವ ದಿಟ್ಟತನ ಮೈಗೂಡಿದ್ದವು.

ಅವನಿಗೆ ಉಪನಯನ ಸಂಸ್ಕಾರ ಮಾಡಲು ತಾಯಿ-ತಂದೆ ಬಯಸಿದಾಗ, ಬಾಲಕ ನಿರಾಕರಿಸಿದ. ಭಾರತೀಯ ಸಮಾಜದಲ್ಲಿ ಧರ್ಮದ ಹೆಸರಿನಲ್ಲಿ ಸೃಷ್ಟಿಯಾಗಿದ್ದ ವರ್ಣ ಮತ್ತು ಜಾತಿ ವ್ಯವಸ್ಥೆಗಳು, ಬೆಳೆದು ಬಂದಿದ್ದ ಮೂಢನಂಬಿಕೆಗಳು, ಮತ್ತು ಅವು ಮಾಡುತ್ತಿದ್ದ ಶೋಷಣೆ ಬಾಲಕ ಬಸವಣ್ಣನ ಮನಸ್ಸನ್ನು ಕಲಕಿದ್ದವು.



ವಿಚಾರ ಪ್ರಧಾನವಾದ, ಸರ್ವ ಸಮಾನತೆ ಸಾರುವ, ಮಾನವತೆಗೆ ಬೆಲೆ ಕೊಡುವ, ಸಕಲರ ಲೇಸು ಬಯಸುವ ಹದುಳಿಗ ಧರ್ಮವೊಂದರ ಕನಸು ಬಾಲಕನಲ್ಲಿ ಅಸ್ಪಷ್ಟವಾಗಿ ಮೂಡುತ್ತಿತ್ತು. ಈ ಸತ್ಯದ ಆವಿಷ್ಕಾರ ಮತ್ತು ಅನುಷ್ಠಾನಕ್ಕಾಗಿ ಬಸವಣ್ಣನು ತಾಯಿ-ತಂದೆಯರ ಮಮತೆಯ ಬಂಧನವನ್ನು ಹರಿದೊಗೆದು ಮನೆಯಿಂದ ನಿರ್ಗಮಿಸಿದ.

ಮುದ್ದು ತಮ್ಮನನ್ನು ಪ್ರಾಣಕ್ಕಿಂತಲೂ ಮಿಗಿಲಾಗಿ ಪ್ರೀತಿಸುತ್ತಿದ್ದ ಅಕ್ಕ ನಾಗಮ್ಮನು ತಾಯಿ-ತಂದೆಗಳ ಮೋಹದ ಕರೆಯನ್ನೂ ಗಮನಿಸದೆ ತಮ್ಮನಿಗೆ ಬೆನ್ನಾಸರೆಯಾಗಿ ನಡೆದಳು. ಆಕೆಯನ್ನು ಲಗ್ನ ಮಾಡಿಕೊಟ್ಟಿದ್ದ ಊರು ಕೂಡಲ ಸಂಗಮವು ಆಗಿದ್ದರಿಂದ (ಅದು ಬ್ರಹ್ಮಪುರಿ ಎಂದು, ಸಂಗಮಕ್ಕೆ ಹತ್ತಿರವೆಂದು ಕೆಲವರ ಅಭಿಪ್ರಾಯ) ಆಕೆ ತನ್ನ ಸ್ವಗೃಹದಲ್ಲಿರುವುದೆಂದು, ಬಸವಣ್ಣನು ಸುಪ್ರಸಿದ್ಧ ಶೈವ ಗುರುಕುಲದಲ್ಲಿ ಜಾತವೇದ ಗುರುಗಳ ಸನ್ನಿಧಿಯಲ್ಲಿ ಇರುವುದೆಂದು ನಿಶ್ಚಿತವಾಯಿತು. ಕೂಡಲ ಸಂಗಮವು ಆಗ ಪ್ರಸಿದ್ಧ ಶೈವಕ್ಷೇತ್ರವಾಗಿದ್ದಿತ್ತಷ್ಟೇ ಅಲ್ಲ, ತನ್ನ ಪಾಶುಪತ ಪರಂಪರೆಗನುಗುಣವಾಗಿ ಎಲ್ಲಾ ಜಾತಿ ಮತ ಪಂಥದ ಮುಮುಕ್ಷು-ಸಾಧಕರಿಗೆ ಜ್ಞಾನಕೇಂದ್ರವಾಗಿತ್ತು.

ಬಸವಣ್ಣನ ಅಧ್ಯಾತ್ಮ ಪ್ರವೃತ್ತಿ-ಪೂಜಾಸಕ್ತಿಗಳನ್ನು ಕಂಡ ಜಾತವೇದ ಗುರುಗಳು ಸಂಗಮನಾಥನನ್ನು ಅರ್ಚಿಸುವ ಕಾಯಕವನ್ನು ಕೊಟ್ಟರು. ಜ್ಞಾನಾರ್ಜನೆಯನ್ನು ಮಾಡುತ್ತಲೇ ಅರ್ಚನೆಯ ಕಾಯಕದಲ್ಲಿ ತನ್ಮಯನಾದ ಬಸವಣ್ಣ. ಸೂರ್ಯೋದಯಕ್ಕೆ ಮುನ್ನವೇ ಎದ್ದು, ಕೃಷ್ಣಾನದಿಯ ತಣ್ಣೀರಿನಲ್ಲಿ ಮಿಂದು ಮಡಿಯಿಂದ ಅಳಿ ಎರಗದ, ಅನಿಲನಲುಗದ, ಸೂರ್ಯಕಿರಣಗಳು ಸೋಂಕದ ಹೂವುಗಳನ್ನು, ಮಡಿ ನೀರನ್ನು ತಂದು ಪೂಜಿಸುವನು. ಹಾಡುತ್ತ-ಆಡುತ್ತ, ನೋಡುತ್ತ-ಕಾಡುತ್ತ ಮೈಮರೆಯುವನು.

ಸುಮಾರು ಇಪ್ಪತ್ತೆರಡು ವರುಷಗಳು ಸಂದುವು. ಈಗ ಪ್ರೌಢಮತಿಯ, ಸಾತ್ವಿಕ ತೇಜಸ್ಸಿನ ತರುಣನಾಗಿದ್ದಾನೆ ಬಸವಣ್ಣ. ಗುರುಕುಲದ ವಿದ್ಯೆಯನ್ನು ಸಂಪೂರ್ಣ ಮತಿಗತ ಮಾಡಿಕೊಂಡು ಮುಗಿಲೆತ್ತರಕ್ಕೆ ಬೆಳೆದಂತೆ ತೋರುವ ಬಸವಣ್ಣನ ಭವಿಷ್ಯದ ಬಗ್ಗೆ ಗುರುಗಳು ಚಿಂತಿಸುತ್ತಿರುವಾಗಲೇ ಸಂಗಮದ ರಥೋತ್ಸವ ಮತ್ತು ಗುರುಕುಲದ ವಾರ್ಷಿಕೋತ್ಸವ ಒದಗಿ ಬಂದವು. ಅಂದಿನ ವರುಷ, ಮನೆದೇವರಾದ ಸಂಗಮನನ್ನು ದರ್ಶಿಸಲು ಮತ್ತು ಗುರುಕುಲದ ಘಟಿಕೋತ್ಸವದಲ್ಲಿ ಭಾಗವಹಿಸಲು ಮುಖ್ಯ ಅತಿಥಿಗಳಾಗಿ ಆಗಮಿಸಿದ ಚಾಲುಕ್ಯ ರಾಜ್ಯದ ಪ್ರಧಾನ ಮಂತ್ರಿ ಬಲದೇವರಸರು ಗುರುಕುಲಾಭ್ಯಾಸಿಗಳಲ್ಲಿ ಅತ್ಯಂತ ತೇಜಸ್ವಿಯೂ, ಪ್ರತಿಭಾವಂತನೂ ಆದ

ಬಸವಣ್ಣನನ್ನು ಮೆಚ್ಚುವುದಷ್ಟೇ ಅಲ್ಲ, ಅವನು ತನ್ನ ಸೋದರಳಿಯನೇ ಎಂಬುದನ್ನೂ ಅರಿತಾಗ ಸಂಭ್ರಾಂತನಾಗಿ, ತನ್ನ ಏಕೈಕ ಪುತ್ರಿ ಗಂಗಾಂಬಿಕೆಯನ್ನು ವಿವಾಹ ಮಾಡಿಸಲು ಬಯಸುತ್ತಾನೆ.

ಅಂತರ್ಮುಖಿಯೂ, ಸಂಯಮ ಜೀವನಾಸಕ್ತನೂ ಆದ ಬಸವಣ್ಣನು ಈ ಆಹ್ವಾನವನ್ನು ನಿರಾಕರಿಸುತ್ತಾನೆ. ಆದರೆ ಗುರುಗಳು ಇದು, ಬಸವಣ್ಣ ನಿರಿಸಿಕೊಂಡ ಕನಸುಗಳು ನನಸಾಗಲು ನಾಂದಿ ಹಾಡಲಿದೆ; ಮತ್ತು ಅವನು ಬಯಸಿದ ಸಾಮಾಜಿಕ ಕ್ರಾಂತಿಗೆ ಸಹಾಯಕವಾಗುವುದು ಎನ್ನುವರು. ಸಂಗಮನಾಥನು ಕನಸಿನಲ್ಲಿ ಕಾಣಿಸಿಕೊಂಡು ಹಾಗೆ ಆಜ್ಞಾಪಿಸುವನು. ಆಗ ಬಸವಣ್ಣ ಒಪ್ಪುವನು. ವಿವಾಹದ ದಿನಾಂಕವೊಂದನ್ನು ನಿಶ್ಚಯಿಸಿ ಬಲದೇವರಸರು ತೆರಳುವರು.

ಒಂದು ದಿನ ಸುಪ್ರಭಾತದಲ್ಲಿ ಮಿಂದು ಬಸವಣ್ಣ ಧ್ಯಾನಾಸಕ್ತನಾಗಿ ಕುಳಿತಿರುವಾಗಲೇ ಅವನಿಗೆ ಅಂತರ್ ಪ್ರೇರಣೆ, ಅಂತರ್ಬೋಧೆ ಮತ್ತು ಜ್ಞಾನೋದಯವಾಗುವುದು. ಬೋಧಿವೃಕ್ಷದ ಕೆಳಗೆ ಕುಳಿತ ಸಿದ್ಧಾರ್ಥ ಬುದ್ಧನಾದಂತೆ, ಇಲ್ಲಿಯವರೆಗೆ ಬಸವಣ್ಣನಾಗಿದ್ದವನು ಈಗ ಸಂಗನ ಬಸವಣ್ಣ (Blessed son of God) ನಾಗುವನು. ಸಾಮಾಜಿಕ-ಧಾರ್ಮಿಕ ಸಮಾನತೆ ತರಬಲ್ಲ ತಾತ್ತ್ವಿಕ-ವೈಜ್ಞಾನಿಕ ಅರ್ಥ ಉಳ್ಳ ಕುರುಹೊಂದನ್ನು ಕಂಡು ಹಿಡಿಯ ಬಯಸಿ ಯಶಸ್ವಿಯಾದ ಬಸವಣ್ಣ ಆತ್ಮದ ಪ್ರತೀಕವಾದ ಹುಟ್ಟುಲಿಂಗವನ್ನು (ಆ ತನಕ ಶಿವನ ಪ್ರತೀಕವಾಗಿದ್ದುದು) ಪರಮಾತ್ಮನ ಪ್ರತೀಕವಾದ ಗೋಲಾಕಾರದ ಕಂಥೆಯಲ್ಲಿ ಹುದುಗಿಸಿ ಏಕೋಭಾವದ ಅಹಂಗ್ರಹೋಪಾಸನೆಗೆ ನಾಂದಿ ಹಾಡುವನು. ಹಾಗೆ ಕಂಡು ಹಿಡಿದ ಇಷ್ಟಲಿಂಗವನ್ನು ತಾನೇ ಅಂತಃಸಾಕ್ಷಿಯಾಗಿ ಧರಿಸುವನು. ಹೀಗೆ ಹಿಂದಿನಿಂದ ಸ್ಥಾವರ ಲಿಂಗ ಪೂಜಕರು, ಧಾರಕರು ಶೈವ ಸಂಪ್ರದಾಯದಲ್ಲಿದ್ದರೂ, ಅದರಿಂದ ಭಿನ್ನವಾದ ಇಷ್ಟಲಿಂಗ ಪೂಜೆ-ಧಾರಣೆಗಳನ್ನು ಬಳಕೆಗೆ ತಂದು, ಎಲ್ಲ ಜನಾಂಗದವರಿಗೆ ದೀಕ್ಷೆ ನೀಡಿ ನೂತನ ಜನಾಂಗವೊಂದರ ನಿರ್ಮಾಪಕನಾದ ಬಸವಣ್ಣ.

ಸ್ವಯಂ ಜ್ಞಾನಿಯಾದ ಬಸವಣ್ಣನವರು, ಈಶಾನ್ಯ ಗುರುಗಳ ಆಶೀರ್ವಾದವನ್ನು ಪಡೆದು, ಪರಮಾತ್ಮನ ರಾಜತೇಜ ಮತ್ತು ಕರುಣೆಗಳನ್ನು ಬೆನ್ನಲ್ಲಿ ಹೊತ್ತು, ಕೂಡಲ ಸಂಗಮದಿಂದ ನಿರ್ಗಮಿಸಿದರು. ಅಲ್ಲಿಂದ ಕಲ್ಯಾಣಕ್ಕೆ ಬಂದು ಬಲದೇವರಸರ ಪುತ್ರಿ ಗಂಗಾಂಬಿಕೆಯನ್ನು ವಿವಾಹವಾದರು. ಆದರೆ ಮುಂಚಿನಿಂದಲೂ (ಸಂಗಮದ ಜಾತ್ರೆಯಲ್ಲಿ ಕಂಡಾಗಿನಿಂದಲೂ) ಬಸವಣ್ಣನವರ ವ್ಯಕ್ತಿತ್ವಕ್ಕೆ ಮನದಲ್ಲೇ ಮಾರುಹೋಗಿದ್ದ ಸಿದ್ಧರಸ ಮಂತ್ರಿಗಳ ಪುತ್ರಿ ನೀಲಾಂಬಿಕೆ ತನ್ನ ಬಯಕೆಯ ತೃಪ್ತಿಯಿಂದ ವಂಚಿತಳಾಗಿ ಕೊರಗ ತೊಡಗಿದ್ದಳು. ಒಂದು ಬಳ್ಳಿಯ ಎರಡು ಹೂಗಳಂತೆ



ಬೆಳೆದಿದ್ದ ಗಂಗಾ ನೀಲಾರು ಎರಡು ದೇಹ ಒಂದು ಆತ್ಮವಾಗಿ ಬಾಳಿದ್ದರು. ನೀಲಾಂಬಿಕೆ ಮನದಲ್ಲೇ ಕೊರಗುವುದನ್ನು ಕಂಡಾಗ ಗಂಗಾಂಬಿಕೆ ವಿವಂಚಿತಳಾಗಿ, ತನ್ನ ಪತಿಯ ಮೇಲೆ ನೀಲಾಂಬಿಕೆಗೆ ಬೆಳೆದಿರುವ ಅವ್ಯಕ್ತ ಪ್ರೇಮವೇ ಕಾರಣವೆಂದರಿತಳು. ಬಸವ ಬಾಳಿನ ಎರಡು ಕಣ್ಣುಗಳಾಗಿ ಕಾರ್ಯಮಾಡುವ ಸಂಕಲ್ಪ ಹೊತ್ತರವರೀರ್ವರು. ಆಗ ಗಂಗಾಂಬಿಕೆ ಮತ್ತು ಅಕ್ಕನಾಗಮ್ಮ ಒತ್ತಾಯ ಮಾಡಿ ನೀಲಾಂಬಿಕೆಯ ವಿವಾಹಕ್ಕೆ ಬಸವಣ್ಣನವರ ಮನಸ್ಸನ್ನೊಲಿಸಿದರು. 'ಯಾಕೋ ಬಂಧನ ಬಿಗಿಯಾಗುತ್ತಿದೆ' ಎಂದುಕೊಂಡು ಮನನೊಂದ ಬಸವಣ್ಣನವರು, ಸಹೋದರಿಯ ಮಾತಿಗೆ ಮನ್ನಣೆಯಿತ್ತು, ಆದರೂ ನೀಲಾಂಬಿಕೆಯಿಂದ ಧ್ಯೇಯಾದರ್ಶಕ್ಕೆ ದುಡಿಯುವ ಪ್ರತಿಜ್ಞೆ ಮಾಡಿಸಿ, ವಿವಾಹವಾದರು. ಸ್ವಂತ ಕಾಯಕದ ಮೇಲೆ ಜೀವಿಸಲೋಸುಗ ಅರಮನೆಯಲ್ಲಿ ಕರಣಿಕ ಕಾಯಕ ಸ್ವೀಕಾರ ಮಾಡಿದರು.

ಸ್ವಯಂಕೃತ (Self made) ಗುರುವಾದ ಬಸವಣ್ಣನವರು ನೂತನ ಧರ್ಮದ ಜೀವಾಳವಾದ ಇಷ್ಟಲಿಂಗವನ್ನು ಜ್ಞಾನ ಸಾಧನವಾಗಿರಿಸಿಕೊಂಡು ಜಾತ್ಯಾತೀತ ಸಮಾಜ ರಚನೆಗೆ ತೊಡಗಿದರು. ಅದಕ್ಕೆ ಒಂದು ಸಹಾಯಕ ಸಾಧನವಾಗಿ ಅನುಭವ ಮಂಟಪವೆಂಬ ಅಧ್ಯಾತ್ಮ ಸಂಸ್ಥೆಯನ್ನು ರೂಪಿಸಿದರು. ಧರ್ಮ ಸಂಸ್ಕಾರ ನೀಡಿ ಎಲ್ಲ ಜಾತಿ ಮತ ಪಂಥದವರನ್ನು ಇಂಬಿಟ್ಟುಕೊಂಡರು. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ನಾಡಿನಾದ್ಯಂತದಿಂದ ಮುಮುಕ್ಷುಗಳು ಬಂದು ಸಮಾವೇಶವಾದರು. ಪ್ರತಿನಿತ್ಯ ಜ್ಞಾನ ದಾಸೋಹ-ಅನುಭವ ಗೋಷ್ಠಿ ನಡೆದವು. ಧರ್ಮ ಪ್ರಚಾರಕ ಜಂಗಮ (missionaries) ರನ್ನು ರೂಪಿಸಿ ನಾಡಿನೆಲ್ಲೆಡೆಗೆ, ಓಣಿ ಓಣಿಗಳಿಗೆ ಕಳುಹಿಸಿದರು ಬಸವಣ್ಣನವರು. ಸಂಪ್ರದಾಯವು ತಿರಸ್ಕರಿಸಿ ಕೀಳು ಜನರೆಂದು ಶೋಷಿಸಿದ್ದವರನ್ನು, ಪತಿತರನ್ನು ಮರುಕದಿಂದ ಕಂಡು ಧರ್ಮ ಸಂಸ್ಕಾರ ನೀಡಿ ಬಸವಣ್ಣನವರು ಅನುಭವ ಮಂಟಪದಲ್ಲಿ ಆಶ್ರಯ ನೀಡಿದರು. ಈ ಶರಣ ಬಳಗಕ್ಕೆ ಅಲ್ಲಮಪ್ರಭುದೇವರು, ಅಕ್ಕಮಹಾದೇವಿ, ಸೊನ್ನಲಿಗೆಯ ಸಿದ್ಧರಾಮೇಶ್ವರರು, ಕಾಶ್ಮೀರದರಸು ಮೋಳಿಗೆ ಮಾರಯ್ಯ, ಅಫ್ಘಾನಿಸ್ಥಾನದ ಮರುಳು ಶಂಕರ ದೇವರು ಮುಂತಾದವರು ಧಾವಿಸಿ ಬಂದರು. ಏಳು ನೂರಾ ಎಪ್ಪತ್ತು ಜನ ವಿಶೇಷ ವ್ಯಕ್ತಿತ್ವದ ಶರಣರು, ಅಸಂಖ್ಯಾತ ಅನುಯಾಯಿಗಳಲ್ಲೂ, ಅವರಲ್ಲಿ ಮೂರುನೂರು ಜನ ವಚನಕಾರರು, ಅರವತ್ತು ಶರಣೆಯರು, ಮೂವತ್ತು ವಚನಕಾರ್ತಿಯರು ಅನುಭವ ಮಂಟಪದ ಶುಭಾಗಸದಲ್ಲಿ ಬಸವಣ್ಣನೆಂಬ ಹುಣ್ಣಿಮೆ ಚಂದ್ರನ ಸುತ್ತ ನೆರೆದಾಗ, ಜಗತ್ತಿನ ಧಾರ್ಮಿಕ ಇತಿಹಾಸದಲ್ಲೇ ಒಂದು ಸುವರ್ಣ ಪುಟ ತೆರೆಯಲ್ಪಟ್ಟಿತು.

ಶೂನ್ಯ ಪೀಠಾಧೀಶ ಅಲ್ಲಮ ಪ್ರಭು, ಸಮ್ಯಕ್‌ಜ್ಞಾನಿ ಚೆನ್ನಬಸವಣ್ಣ, ವೀರ ವೈರಾಗ್ಯನಿಧಿ ಅಕ್ಕಮಹಾದೇವಿ, ಶಿವಯೋಗಿ ಸಿದ್ಧರಾಮೇಶ್ವರರು ಬಸವಣ್ಣ

ನವರ ಧಾರ್ಮಿಕ ಹೋರಾಟಕ್ಕೆ ಬೆಂಬಲವಾಗಿ ನಿಂತರು. ಶೋಷಣೆಯ ಮೇಲು ಕೀಳೆಂಬ ಭೇದಭಾವದ ಬಿಸಿಲಲ್ಲಿ ನಲುಗಿದ್ದ ಅಸಂಖ್ಯಾತ ಜೀವಿಗಳು ಬಸವ ಮಾವುರ ತ್ವದ ಕೆಳಗೆ ಆಶ್ರಯ ಪಡೆದರು. ಸುಜಲವನ್ನೀಂಟಿ, ಸುಜ್ಞಾನದ ಪರಮಾನ್ನವನ್ನುಂಡು ಧಾರ್ಮಿಕ ಸ್ವಾತಂತ್ರ್ಯದ ಸ್ವಚ್ಛವಾದ ಗಾಳಿಯನ್ನುಸಿರಾಡಿ ಪುನಶ್ಚೇತನ ಪಡೆದರು.

ತಮ್ಮ ಕ್ರಾಂತಿ ಪಥದ ದಾರಿ ದೀಪವಾಗುವಂತಹ ಅಂತರ್ಜಾತೀಯ ವಿವಾಹಕ್ಕೆ ಬಸವಣ್ಣನವರು ಯತ್ನಿಸಿದರು. ಬ್ರಾಹ್ಮಣ ಕುಲದ ಮಧುವರಸನ ಪುತ್ರಿ ಲಾವಣ್ಯವತಿಯನ್ನು ಸಮಗಾರ ಕಾಯಕದ ಹರಳಯ್ಯನ ಪುತ್ರ ಶೀಲವಂತನಿಗೆ ಕೊಟ್ಟು ವಿವಾಹ ಮಾಡಿಸಿದರು. ಶರಣರೆಲ್ಲರು ಒಮ್ಮತದ ನಿರ್ಧಾರ ಕೈಗೊಂಡು ಪ್ರೋತ್ಸಾಹಿಸಿದರು. ಆದರೆ ಜಾತಿ ವಾದಿಗಳ ಕಣ್ಣು ಕೆಂಪಗಾದವು, ಅಸಹನೆಯ ದಳ್ಳುರಿ ಎದ್ದಿತು.

ವರ್ಣಸಂಕರದ ಆರೋಪದ ಮೇಲೆ ಹರಳಯ್ಯ–ಮಧುವಯ್ಯ–ಶೀಲವಂತರನ್ನು ಕಾರಾಗೃಹಕ್ಕೆ ಕಳುಹಿಸಿ, ಶಾಸ್ತ್ರಪಾರಂಗತರ ಒಂದು ಆಯೋಗವನ್ನು ವಿಚಾರಣೆಗೆ ನೇಮಿಸಲಾಯಿತು. ಬಂಧಿತರನ್ನು ಅಪರಾಧಿಗಳೆಂದು ತೀರ್ಮಾನಿಸಿದಾಗ, ಬಸವಣ್ಣನವರು ಈ ಅನ್ಯಾಯ ಸಹಿಸದೆ ಪ್ರಧಾನಿ ಪಟ್ಟಕ್ಕೆ ರಾಜೀನಾಮೆ ನೀಡಿದರು. "ಇಬ್ಬರೂ ನೂತನ ಧರ್ಮದ ಸಂಸ್ಕಾರ ಪಡೆದು ಪೂರ್ವಾಶ್ರಮ ತೊರೆದು ಶರಣರಾಗಿರುವುದರಿಂದ ಇದು ವರ್ಣಸಂಕರವಲ್ಲ." ಎಂದು ಪ್ರತಿಪಾದಿಸಿ ಮನುಷ್ಯ–ಮನುಷ್ಯರಲ್ಲಿ ಮೇಲು–ಕೀಳೆಂಬ ಭೇದ ನಿರ್ಮಾಣ ಅಮಾನವೀಯ ಎಂದು ವಾದಿಸಿದರು. ಆದರೆ ಎರೆಗಿವಿಯ ಮರುಳನು, ಸ್ವತಂತ್ರ ವಿಚಾರ ಸಾಮರ್ಥ್ಯವಿಲ್ಲದ ಮೂಢನು ಆದ ಬಿಜ್ಜಳನು ಜಾತಿವಾದಿಗಳ ತೀರ್ಪಿಗೆ ಒಪ್ಪಿಗೆ ನೀಡಿದಾಗ ಬಸವಣ್ಣನವರು ಪ್ರತಿಭಟಿಸಿ ಅಧಿಕಾರವನ್ನು ತೊರೆದರು.

ಆದರೆ ಚಾಡಿಕೋರರು ಕ್ರಾಂತಿಯನ್ನು ಸಂಪೂರ್ಣವಾಗಿ ನಾಶಮಾಡಬೇಕೆಂದು ಸಂಕಲ್ಪಿಸಿ, "ಬಸವಣ್ಣನವರು ಅಧಿಕಾರ ತ್ಯಾಗದ ನಂತರ ಕಲ್ಯಾಣದಲ್ಲಿದ್ದರೆ ಜನಸಾಮಾನ್ಯರು ಅನ್ಯಾಯವನ್ನು ಪ್ರತಿಭಟಿಸಲು ದಂಗೆ ಏಳಬಹುದಾದ ಕಾರಣ ಸಿಂಹಾಸನವು ಅಲ್ಲಾಡಬಹುದೆಂಬ ಭೀತಿಯನ್ನು ಬಿಜ್ಜಳನಲ್ಲಿ ಹುಟ್ಟಿಸಿ, ಅವನು ಅಣ್ಣನವರಿಗೆ ಗಡಿಪಾರು ಶಿಕ್ಷೆಯನ್ನು ವಿಧಿಸುವಂತೆ ಪ್ರೇರೇಪಿಸಿದರು.

ಗಡಿಪಾರಿನ ರಾಜಾಜ್ಞೆ ಸ್ವೀಕರಿಸಿ, ಶರಣರಿಂದ ಬೀಳ್ಕೊಂಡು ಬಸವಣ್ಣನವರು ತಮ್ಮ ಬಾಲ್ಯವನ್ನು ಕಳೆದ ಕೂಡಲ ಸಂಗಮಕ್ಕೆ ಬಂದರು. ಸುಮಾರು ಮೂರು ತಿಂಗಳು ಕಾಲ ಅನುಷ್ಠಾನದಲ್ಲಿ ತೊಡಗಿದ್ದರು. ಪೂಜಾಮಗ್ನರಾಗಿ ಅವರೊಂದು ದಿನ ಕುಳಿತಾಗ ಪರಮಾತ್ಮನ ಕರೆ ಕೇಳಿಸಿತು. ತಾವು ಬಂದ ಮಣಿಹ ಮುಗಿಯಿತೆಂದು



ಅರಿತು, ಯೋಗ ಸಾಮರ್ಥ್ಯದಿಂದ ಪ್ರಾಣವಿಸರ್ಜನೆ ಮಾಡಿ, ಪ್ರಕೃತಿ ಕಾಯವನ್ನು ತೊರೆದರು. ಆತ್ಮನನ್ನು ಪರಮಾತ್ಮನಲ್ಲಿ ಸಮರಸಗೊಳಿಸಿದರು. ಉರಿಯನ್ನಪ್ಪಿದ ಕರ್ಪೂರದಂತೆ ಮರ್ತ್ಯದ ಬಾಳ್ವೆಗೆ ಮಂಗಲ ಹಾಡಿದರು.

ಜೀವನದುದ್ದಕ್ಕೂ ಮಾನವರ ಧಾರ್ಮಿಕ ಸ್ವಾತಂತ್ರ್ಯಕ್ಕಾಗಿ, ಸಮಾನತೆಗಾಗಿ ಹೋರಾಡಿ ಮನುಕುಲದ ಲೇಸಿಗಾಗಿ ಶ್ರೀಗಂಧದಂತೆ ಸವೆದು ದೀಪವಾಗಿ ಉರಿದ ತ್ಯಾಗಪುರುಷ ಬಸವಣ್ಣನವರು. ಅವರ ಬದುಕು ನಮಗೆಲ್ಲ ಮಾರ್ಗದರ್ಶಕವಾಗಲಿ.

ನಿಮ್ಮೊಲವಿನ—
**ತ್ರಿನೇತ್ರಿ**

## ಬಸವ ವಾಣಿ

'ನುಡಿದರೆ ಮುತ್ತಿನಹಾರದಂತಿರಬೇಕು'
ಹೀಗೆಂದು ಬೋಧಿಸಿಹ ತಂದೆ ಬಸವಣ್ಣ
ಬಾಳುಗೆಲ್ಲಲ್ಲು ಸತ್ಯಶುದ್ಧ – ನಡೆ, ನುಡಿ. ಸಾಕು
ಇದ ತಿಳಿದು ಮುಂದೆ ನಡೆ ಮುದ್ದು ಚಿಣ್ಣ.

## * * ನಗೆ ಹನಿ * *

ಓರ್ವ ಹಳ್ಳಿಯವನು ಪಟ್ಟಣಕ್ಕೆ ಬಂದು ಹೊಸತೊಂದು ಫುಲ್ ಪ್ಯಾಂಟ್ ಹೊಲಿಸಿಕೊಂಡು, ಅದನ್ನು ಧರಿಸಿ ತನ್ನೂರ ಕಡೆ ಹೋಗಲು ಬಸ್ ಹತ್ತಿದ. ಅವನೊಡನೆ ನಿಕ್ಕರ್ ಧರಿಸಿದ ಓರ್ವ ಬಾಲಕನೂ ಬಸ್ ಏರಿದ. ಕಂಡಕ್ಟರನು ಬಾಲಕನನ್ನು ಅರ್ಧ ಛಾರ್ಜು ಕೊಡಲು ಮತ್ತು ಯುವಕನನ್ನು ಪೂರ್ಣ ಛಾರ್ಜು ಕೊಡಲು ಹೇಳಿದ. ಹಳ್ಳಿಗನಿಗೆ ಅಚ್ಚರಿಯಾಯ್ತು.

"ಅದ್ಯಾಕ್ರಿ ನಾನು ಜಾಸ್ತಿ ಕೊಡಬೇಕು." ರೇಗಿ ಕೇಳಿದ. ತಮಾಷೆ ಸ್ವಭಾವದ ಕಂಡಕ್ಟರ್ ಹೇಳಿದ :

"ಹಾಫ್ ಪ್ಯಾಂಟು ಹಾಕಿದವರು ಅರ್ಧ. ಫುಲ್ ಪ್ಯಾಂಟ್ ಹಾಕಿದವರು ಪೂರ್ಣ." ಕ್ಷಣ ಕಾಲ ಗಂಭೀರವಾಗಿ ಚಿಂತಿಸಿದ ಹಳ್ಳಿಗ ಪ್ಯಾಂಟ್ ಬಿಚ್ಚಲು ತೊಡಗಿದ. ಆಶ್ಚರ್ಯದಿಂದ ಕಂಡಕ್ಟರ್ ಕೇಳಿದಾಗ ಹೇಳಿದ :

"ಹಾಗಾದರೆ ಪ್ಯಾಂಟನ್ನು ಪೂರ್ತಿ ಬಿಚ್ಚಿ ಬಿಡ್ತೀನಿ. ಪುಕ್ಕಟ್ಟೆ ಹೋಗಬೋದಲ್ಲ."

## ನಗೆ ಹನಿ...............

೧

ಓರ್ವ ಗೃಹಸ್ಥ ನೆರೆಮನೆಯವನನ್ನು ಕೋರ್ಟಿಗೆ ಎಳೆದಿದ್ದ. ಕಾರಣವಿಷ್ಟೇ. ಅವನು ಇವನ ಮನೆಯಲ್ಲಿ ಬಾಡಿಗೆದಾರನಾಗಿದ್ದು, ಮನೆ ಬಿಡುವಾಗ ಬಹಳಷ್ಟು ಹಾಳು ಮಾಡಿದ್ದ. ಪರಿಹಾರಕ್ಕಾಗಿ ನ್ಯಾಯಾಲಯದ ಕಟ್ಟೆ ಏರಿದ್ದ.

ಆರೋಪಿಯ ಪರ ವಾದಿಸುವ ವಕೀಲರು ಹೀಗೆ ಆರಂಭಿಸಿದರು :

"ಮಹಾಸ್ವಾಮಿ, ನಾನಿಂದು ಆಪಾದಿತನು ಮನೆಯನ್ನು ಬಾಡಿಗೆಗೆ ತೆಗೆದುಕೊಂಡೇ ಇರಲಿಲ್ಲವೆಂದು ಸಿದ್ಧಪಡಿಸಬಲ್ಲೆ; ಎರಡನೆದಾಗಿ ತೆಗೆದುಕೊಂಡಾಗ ಅದು ಸಾಕಷ್ಟು ಹಾಳಾಗಿತ್ತೆಂದು ಸಿದ್ಧ ಪಡಿಸುವೆ. ಮೂರನೆಯದಾಗಿ ಮನೆ ಖಾಲಿ ಮಾಡಿ ಆಪಾದಿತನು ಹೊರಟಾಗ ಅದು ಚೆನ್ನಾಗಿತ್ತೆಂದೇ ಸಿದ್ಧಪಡಿಸಬಲ್ಲೆ."

೨

ನ್ಯಾಯವಾದಿ ಮತ್ತು ಆದಾಯ ತೆರಿಗೆ ಅಧಿಕಾರಿ, ಈರ್ವರು ವಿದ್ಯಾವಂತರು ಒಂದು ಉಪಾಹಾರ ಗೃಹದಲ್ಲಿ ಕುಳಿತು ಮಾತನಾಡುತ್ತಿದ್ದರು.

ಓರ್ವ : ನಾನು ಯಾವಾಗಲೂ ಇತರರು ಹೇಳಿದ್ದರಲ್ಲಿ ಅರ್ಧದಷ್ಟು ಮಾತ್ರ ನಂಬುವೆ.

ಇನ್ನೋರ್ವ : ಅದೇಕೆ?

ಮೊದಲಿಗ ; ನಾನು ವಕೀಲ.

ಎರಡನೆಯವ : ನಾನು ಇನ್ನೊಬ್ಬರು ಹೇಳಿದ್ದಕ್ಕಿಂತ ಎರಡರಷ್ಟು ನಂಬುವೆ.

ಮೊದಲಿಗ : ಅದೇಕೆ?

ಎರಡನೆಯವ : ನಾನು ಆದಾಯ ತೆರಿಗೆ ಅಧಿಕಾರಿ.

೩

ಬಸ್ ಚಾಲಕ : ನಮಸ್ಕಾರ, ಬನ್ನಿ ಪಟೇಲರೇ ಬಸ್ಸಿನಲ್ಲಿ ಕುಳಿತುಕೊಳ್ಳಿ.

ಪಟೇಲ : ಇಲ್ಲಯಪ್ಪ, ನನಗೆ ಬಸ್ನಲ್ಲಿ ಕೂತುಕೊಳ್ಳಾಕೆ ಪುರುಸೊತ್ತಿಲ್ಲ. ಅರ್ಜೆಂಟ್ ಹೋಗಬೇಕಾಗಿದೆ. ನಡಕೊಂಡು ಹೊಂಟುಬಿಡ್ತೀನಿ.

೪

ಹೆಂಡತಿ : "ಏನ್ರಿ ಅಂಥಾ ಸದ್ದು ಆಯ್ತು."

ಗಂಡ : ಅಟ್ಟದ ಮೇಲಿಂದ ಶಾಲು ಬಿತ್ತು ಕಣೇ.

ಹೆಂಡತಿ : ಶಾಲು ಬಿದ್ರೆ ಅಷ್ಟೊಂದು ಶಬ್ದ ಆಗುತ್ತಾ ?

ಗಂಡ : ಶಾಲಿನೊಳಗೆ ನಾನು ಇದ್ದೆ ಕಣೆ.

—ನಿರ್ಮಲ ಕುಮಾರಿ ಕೆ. ಎಸ್. ಕಂಕರೆ



# ಬೋಳು ಬಸವನ ಬೊಂತೆ - ೫

## ವಿರತನಾರು ?

ಧನಕನಕ ವಸ್ತ್ರಗಳು ವನಿತಾದಿ ಭೋಗಗಳು
ಮನವೆಳಸಿದಷ್ಟಿರ್ದು ಕಣ್ಣ ಮುಂದೆ
ಅನುಭವಿಪ ಶಕ್ತಿ ತನಗಿರ್ದೊಡಂ ಬಯಸದವ
ಘನ ವಿರತ ಲೋಕದೊಳು—ಬೋಳುಬಸವ ||೧||

ಕಾರುಣ್ಯ ಗುಣ ಸಿಂಧು ದೀನಜನ ವರ ಬಂಧು
ಮಾರಸಾದೃಶರೂಪಿ ಸುಗುಣಿಯೆಂದು
ಸಾರುತಿರೆ ಲೋಕವಭಿಮಾನಿಸದೆ ನಡೆದಾತ
ವೀರ ವಿರತನು ಜಗದಿ—ಬೋಳುಬಸವ ||೨||

ಎತ್ತ ನೋಡಿದಡತ್ತ ಚಿತ್ತ ಬಯಸಿದ್ದಿರಲು
ಸುತ್ತಲೂ ಜನರು ಓಲೈಸಲಿರಲು
ಕತ್ತೆತ್ತಿ ನೋಡದಲೆ ಸತ್ಕಾರ ಪಡೆಯದವ
ಉತ್ತಮೋತ್ತಮ ವಿರತ—ಬೋಳಬಸವ ||೩||

ನಿಂದನೆಯ ಕೇಳ್ದಾಗ ಕುಂದಿ ಕೊರಗದೆ ಮನದಿ
ಚೆಂದದಿಂ ಸ್ತುತಿಸಿದೊಡೆ ಬಲು ಹಿಗ್ಗದೆ
ನಿಂದೆ ಮೇಣ್ಸ್ತುತಿಗಳನ್ನೊಂದಾಗಿ ಕಾಣ್ಬಾತ
ಬಂಧುರದ ವಿರತನೈ—ಬೋಳುಬಸವ ||೪||

ಕಾಮಾದಿಗಳ ಜಯಿಸಿ ಹೇಮಂಗಳಂ ತ್ಯಜಿಸಿ
ವ್ಯೋಮಕಾಯವ ತಾನು ಪಡೆದಿರ್ದರು
ಭೂಮಿಯೊಳು ತನಗಿಂತ ಕಿರಿಯರಿಲ್ಲೆಂಬಾತ
ಸೋಮಧರಸಮ ವಿರತ—ಬೋಳುಬಸವ ||೫||

ಊನವಾಗದ ಹೊನ್ನು ಬಾನಿನಗಲದ ಮಣ್ಣು
ಸಾನುರಾಗದಿ ಬೆರೆವ ಹೆಣ್ಣೆರ್ದರು
ತಾನು ತನ್ನದು ಎಂಬ ಮಮಕಾರವಳಿದಾತ
ಕ್ಷೋಣಿಯೊಳು ನಿಜವಿರತ—ಬೋಳುಬಸವ ||೬||

ಸ್ತುತಿನಿಂದೆ ಸುಖದುಃಖ ಶಮೆಮೋಹ ಭಯಶೌರ್ಯ
ಹಿತವಹಿತ ನಫೆನಷ್ಟ ಪಾಪಪುಣ್ಯ
ರತಿವಿರತ ಮೊದಲಹ ದ್ವಂದ್ವಗಳ ಮೀರಿದವ
ನತಿಶಯದ ವಿರತನೈ—ಬೋಳುಬಸವ ||೭||

—ಪಿ. ಬಸವಣ್ಣ, ಕೊಳ್ಳೇಗಾಲ.

### ಲೇಖಕರ ಪರಿಚಯ

[ಶರಣ ಪಿ. ಬಸವಣ್ಣನವರು ಕೊಳ್ಳೇಗಾಲದ ಓರ್ವ ವಕೀಲರು. ಈಗ ವಕೀಲಿ ವೃತ್ತಿಯನ್ನು ತ್ಯಜಿಸಿ, ಅಧ್ಯಾತ್ಮ ಮತ್ತು ಸಾಹಿತ್ಯ ಕೃಷಿಯಲ್ಲಿ ತನ್ಮಯರಾಗಿರುವ ಸಾಧಕ ಜೀವಿಗಳು. ಸಾಕಷ್ಟು ಸಾಹಿತ್ಯ ಕೃತಿಗಳನ್ನು ರಚಿಸಿರುವುದೇ ಅಲ್ಲದೆ, ಉತ್ತಮ ವಾಗ್ಮಿಗಳು. ಶ್ರೀ ನಿಜಗುಣ ಶಿವಯೋಗಿಗಳ ಬಾಳಿನಿಂದ ಸ್ಫೂರ್ತಿಗೊಂಡಿರುವ ಇವರು, ಎಲ್ಲಾ ಲೌಕಿಕ ಹೊರೆಗಳನ್ನು ಕಳಚಿಕೊಂಡು, "ಬೋಳು ಬಸವ" ರಾಗುವ ಸಂಕಲ್ಪದೊಡನೆ ಸಾಧನೆಯಲ್ಲಿ ನಿರತರಾಗಿರುವ ಅನುಭಾವಿಗಳು.]

ನೀನು ನೀರಿನ ಮೇಲೆ ನಡೆಯ ಬಲ್ಲೆಯಾ? ಅದೇನು ಮಹಾ? ಈ ಚಮತ್ಕಾರವನ್ನು ಒಂದು ಹುಲ್ಲು ಕಡ್ಡಿ ಕೂಡ ಮಾಡಬಲ್ಲುದು. ನೀನು ಆಕಾಶದಲ್ಲಿ ಹಾರಬಲ್ಲೆಯಾ? ಈ ಚಮತ್ಕಾರವನ್ನು ಒಂದು ನೊಣ ಕೂಡಾ ಮಾಡಬಲ್ಲದು. ನೀನು ತಿಂಗಳು ಗಟ್ಟಲೆ ಆಹಾರಾದಿಗಳಿಲ್ಲದೆ ಇರಬಲ್ಲೆಯಾ? ಪಶು ಪಕ್ಷಿಗಳು ಕೂಡ ಈ ಅದ್ಭುತವನ್ನು ಮಾಡಬಲ್ಲವು. ಮಿತ್ರಾ, ನನ್ನ ಈ ಪ್ರಶ್ನೆಗಳಿಂದ ಬೇಸರಗೊಳ್ಳಬೇಡ. ಇನ್ನೊಂದೇ ಪ್ರಶ್ನೆಯನ್ನು ಕೇಳುತ್ತೇನೆ. "ಯಾವನಾದರೊಬ್ಬನ ಹೃದಯ ಸಾಗರದಲ್ಲಿ ಮುಳುಗು ಹಾಕಿ ನೀನು ಅಲ್ಲಿರುವ ಪ್ರೇಮವೆಂಬ ಮುತ್ತನ್ನು ಹೆಕ್ಕಿಕೊಂಡು ಬರಲು ಸಮರ್ಥನಾಗಿರುವೆಯಾ?"

—ಜೇನ್



ಗೀತಾಮೃತ

# ಅರ್ಜುನ ವಿಷಾದಯೋಗ

—ಶ್ರೀ ಸ್ವಾಮಿ ಶಂಕರಾನಂದ

ಈ ಅಧ್ಯಾಯಕ್ಕೆ ಅರ್ಜುನ ವಿಷಾದಯೋಗವೆಂದು ಹೆಸರು. "ವಿಷಾದ ಯೋಗ"—ಎಂತಹ ಆಶ್ಚರ್ಯಕರವಾದ ಹೆಸರು! ವಿಷಾದವೂ ಸಹ ಯೋಗವೇ? ವಿಷಾದವೆಂದರೆ ದುಃಖ ಅಥವಾ ಅಳುವಿಕೆ. ದುಃಖವು ಒಂದು ರೋಗವೆಂದು ಹೇಳುತ್ತಾರೆ. ಸಾಮಾನ್ಯ ಮನುಷ್ಯರು ಅತ್ತರೆ ರೋಗ, ಅರ್ಜುನನು ಅತ್ತರೆ ಯೋಗ. ಅಂದರೆ ನಮಗೆಲ್ಲಾ ಅರ್ಜುನನು ಅತ್ತಂತೆ ಅಳಲು ಬರುವುದಿಲ್ಲ. ಅಳುವ ಕಲೆಯನ್ನು ನಾವು ಅರ್ಜುನನಿಂದ ಕಲಿಯಬೇಕು. ಭಗವದ್ಗೀತೆಯಲ್ಲಿ ಸಾಂಖ್ಯಯೋಗ, ಕರ್ಮ ಯೋಗ, ಜ್ಞಾನಯೋಗ ಇತ್ಯಾದಿ ಯೋಗಗಳನ್ನು ಹೇಳುವುದಕ್ಕೆ ಮೊದಲು ವಿಷಾದಯೋಗವನ್ನು ಹೇಳಿದೆ. ಅಂದರೆ ಭಗವದ್ಗೀತೆಗೆ ವಿಷಾದಯೋಗವು ಸಿಂಹ ದ್ವಾರವೆಂದು ತೋರುತ್ತದೆ. ಯಾವ ಯೋಗವನ್ನು ಸಾಧಿಸಬೇಕಾದರೂ ಮೊದಲು ವಿಷಾದ ಯೋಗದಲ್ಲಿ ಪೂರ್ಣತೆಯನ್ನು ಪಡೆದುಕೊಂಡಿರಬೇಕು. ಶ್ರೀ ರಾಮಕೃಷ್ಣ ಪರಮಹಂಸರು, ಶ್ರೀ ರಾಮತೀರ್ಥರು, ಶ್ರೀ ಮಹಾತ್ಮ ಗಾಂಧೀಜಿಯವರೇ ಮೊದಲಾದವರು ವಿಷಾದಯೋಗದ ಮೂಲಕವಾಗಿಯೇ ಪರಮಸಿದ್ಧಿಯನ್ನು ಪಡೆದುಕೊಂಡಂತೆ ತೋರುತ್ತದೆ. "ಬಾಲಾನಾಂರೋದನಂ ಬಲಂ"—ಬಾಲಕರಿಗೆ ಕಾರ್ಯ ಸಿದ್ಧಿಯನ್ನು ಮಾಡಿಕೊಡಲು ರೋಧನವೇ ಬ್ರಹ್ಮಾಸ್ತ್ರ. ಅರ್ಜುನನು ಶ್ರೀ ಕೃಷ್ಣ ಭಗವಂತನ ಎದುರಿಗೆ ಸಣ್ಣ ಮಗುವಿನಂತೆ ಅತ್ತದ್ದರಿಂದ ಜಗದೋದ್ಧಾರವನ್ನು ಮಾಡುವ ಭಗವದ್ಗೀತೆಯು ಅವತಾರವಾಯಿತು. ಅವನು ಅಳದಿದ್ದರೆ ದುಷ್ಟ ನಿಗ್ರಹವೂ, ಶಿಷ್ಟ ಪರಿಪಾಲನೆಯೂ, ಧರ್ಮೋದ್ಧಾರವೂ ಆಗುತ್ತಿರಲಿಲ್ಲ. ಇದರ ಮೇಲಿಂದ ವಿಷಾದವೂ ಸಹ ಒಂದು ಯೋಗವೇ. ಸರ್ವರೂ ಇಂತಹ ವಿಷಾದಯೋಗವನ್ನು ಪಡೆದುಕೊಂಡು ಪೂರ್ಣ ಸಿದ್ಧಿಯನ್ನು ಪಡೆದುಕೊಳ್ಳುವ ಸುಯೋಗವನ್ನು ಪರಮಾತ್ಮನು ದಯಪಾಲಿಸಲಿ!

ಧೃತರಾಷ್ಟ್ರ ಉವಾಚ:

ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।
ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ||೧||

**ತಾತ್ಪರ್ಯ**: ಎಲೈ ಸಂಜಯ, ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯುದ್ಧ ಮಾಡಬೇಕೆಂದು ಸೇರಿರುವ ನಮ್ಮವರೂ ಮತ್ತು ಪಾಂಡವರೂ ಏನನ್ನು ಮಾಡಿದರು ?

ಪ್ರಶ್ನೆ : ಧೃತರಾಷ್ಟ್ರನೆಂದರೆ ಯಾರು ?

ಉತ್ತರ : ಓದಬೇಕೆಂಬ ಬುದ್ಧಿಯಿಂದ, ಭಗವದ್ಗೀತಾ ಗ್ರಂಥವನ್ನು ತೆರೆಯುತ್ತಲೇ ಪ್ರಾರಂಭದಲ್ಲಿ ಧೃತರಾಷ್ಟ್ರನ ದರ್ಶನವು ಏಕೆ? ಇವನಿಂದ ನಾವು ಯಾವ ಪಾಠವನ್ನು ಕಲಿಯಬೇಕು? ಸರ್ವಜ್ಞರಾದ ವ್ಯಾಸರು ಮೊದಲೇ ಧೃತರಾಷ್ಟ್ರನ ದರ್ಶನವನ್ನು ಮಾಡಿಸುವುದರ ಉದ್ದೇಶವೇನು? ಮೊದಲು ಧೃತರಾಷ್ಟ್ರನೆಂದರೆ ಯಾರೆಂಬುದನ್ನು ನೋಡೋಣ.

"ಧೃತರಾಷ್ಟ್ರ"ನೆಂಬುದು ಒಬ್ಬ ವ್ಯಕ್ತಿ ಹುಟ್ಟಿದಾಗ ನಕ್ಷತ್ರಗಳನ್ನು ನೋಡಿ ಇಟ್ಟ ಹೆಸರಲ್ಲ. ಅದು ಲಾಕ್ಷಣಿಕ ಅರ್ಥ, ಅಂದರೆ ಲಕ್ಷಣದ ಮೇಲಿಂದ ಬಂದದ್ದು. "ಧೃತ-ರಾಷ್ಟ್ರ" ಎಂಬುದು ಎರಡು ಪದಗಳು ಕೂಡಿದ ಸಂಯೋಗಿಕ ಪದ. 'ಧೃತ' ಎಂದರೆ ಧರಿಸುವುದು. ಏನನ್ನು? "ರಾಷ್ಟ್ರವನ್ನು". ಯಾವ ರಾಷ್ಟ್ರವನ್ನು ತನ್ನದಲ್ಲದ ಮತ್ತೊಬ್ಬರ ರಾಷ್ಟ್ರವು ತನ್ನ ಕೈಗೆ ದೊರೆತಾಗ ಅದು ತನ್ನ ಕೈಬಿಟ್ಟು ಹೋಗ ಬಾರದೆಂದು ಪ್ರಯತ್ನ ಮಾಡುವ ಮನುಷ್ಯ. ಪಾಂಡವರ ರಾಷ್ಟ್ರವು ತನ್ನ ಕೈಗೆ ದೊರೆಯಿತು. ಆ ಮೇಲೆ ಪಾಂಡವರು ಬಂದು ತಮ್ಮ ರಾಷ್ಟ್ರವನ್ನು ಕೊಡೆಂದು ಕೇಳಲು, ಕೊಡಲಿಕ್ಕೆ ಇಷ್ಟವಿಲ್ಲದೆ ಕಳವಳಪಡುತ್ತಿರುವುದರಿಂದ ಇವನು ಧೃತರಾಷ್ಟ್ರ.

ಮಹಾಭಾರತ ಯುದ್ಧ ಕಾಲದಲ್ಲಿ ಅಂದರೆ ಐದು ಸಾವಿರ ವರ್ಷಗಳ ಹಿಂದೆ "ಧೃತರಾಷ್ಟ್ರ"ನೆನಿಸಿಕೊಳ್ಳುವವನು ಒಬ್ಬನೇ ಇದ್ದನು. ಈಗ ನೋಡಿದರೆ, ಊರೂರಿನಲ್ಲಿಯೂ, ಗಲ್ಲಿಗಲ್ಲಿಗಳಲ್ಲಿಯೂ, ಮನೆಮನೆಗಳಲ್ಲಿಯೂ, ಹೆಚ್ಚೇಕೆ ಆಶ್ರಮಗಳಲ್ಲಿಯೂ ಧೃತರಾಷ್ಟ್ರರು ದೊರೆಯುತ್ತಾರೆ. ಇದನ್ನು ಕೇಳಿ ಕಣ್ಣು ಕೆಂಪಗೆ ಮಾಡಿ ಕೆಲವರು ಪ್ರಶ್ನೆ ಮಾಡಬಹುದು : ನಾವು ಹೇಗೆ ಧೃತರಾಷ್ಟ್ರರು ? ನಾವು ಯಾವ ರಾಷ್ಟ್ರವನ್ನೂ ಅಪಹರಿಸಿಲ್ಲ. ಯಾರು ಬಂದು ಕೇಳಿದರೂ ಕೊಡುವುದಿಲ್ಲವೆಂದು ಹೇಳಿಲ್ಲ. ನಾವು ಹೇಗೆ ಧೃತರಾಷ್ಟ್ರರು? ಎಂದು ತಮ್ಮ ತಪ್ಪನ್ನು ತಾವು ಮುಚ್ಚಿಕೊಂಡು ಮಾತನಾಡುವವರನ್ನು ಕುರಿತು, ಮತ್ತೊಬ್ಬರ ರಾಷ್ಟ್ರವನ್ನು ತನ್ನದೆಂದು ತಿಳಿದುಕೊಂಡಿರುವ ಲಕ್ಷಣವನ್ನು ತೋರಿಸಿದರೆ ಅವರು ಒಪ್ಪಬಹುದಲ್ಲವೇ? ಸರಿ. ದೇಹವು ಯಾರದು? ಪರಮಾತ್ಮನದು. ಪಂಚಭೂತಾತ್ಮಕವಾದದ್ದು. ಅದು ತನ್ನ ಸ್ವರೂಪಕ್ಕೆ ಸೇರಿದುದಲ್ಲ. ಹಾಗಿದ್ದರೂ ಎದೆಯುಬ್ಬಿಸಿ ಮಾತನಾಡುವವರೆಲ್ಲರೂ ದೇಹವು ತಮ್ಮದೆಂದೇ ಮಾತನಾಡುವರು. ಅಂದ ಮೇಲೆ ಅವರು ಧೃತರಾಷ್ಟ್ರರಲ್ಲದೆ



ಮತ್ತೇನು? ದೇಹಾತ್ಮ ಬುದ್ಧಿಯೇ ಧೃತರಾಷ್ಟ್ರನ ಲಕ್ಷಣ. ಮತ್ತೊಂದು ವಿಷಯ : ಧೃತರಾಷ್ಟ್ರನು ಬರೀ ಕಣ್ಣಿಲ್ಲದ ಕುರುಡನಲ್ಲ. ಅವನಿಗೆ 'ವಿವೇಕ' ಎಂಬ ಒಳಗಣ್ಣೂ ಸಹ ಇಲ್ಲ. ಬರೀ ಹೊರಗಣ್ಣಿಲ್ಲದ ಕುರುಡನಿಂದ ಜಗತ್ತಿಗೆ ಏನೂ ತೊಂದರೆಯಾಗುವುದಿಲ್ಲ. ವಿವೇಕವೆಂಬ ಒಳಗಣ್ಣಿಲ್ಲದ ಕುರುಡರಿಂದ ಜಗತ್ತಿಗೆ ಅಪಾರ ನಷ್ಟವಿದೆ. ಈ ದೃಷ್ಟಿಯಿಂದಲೇ, 'ವಿಶಾಲ ಬುದ್ಧಿಯುಳ್ಳ' 'ವ್ಯಾಸ ಮಹರ್ಷಿ' ಯು ಗೀತೆಯನ್ನು ಓದುವವರನ್ನೆಲ್ಲಾ ಕುರಿತು ಇಲ್ಲಿ ಎಚ್ಚರಿಸಿದ್ದಾನೆ. ಹೇಗೆಂದರೆ ನೋಡಿರಿ, ನೀವು ಧೃತರಾಷ್ಟ್ರನಂತಹ ಅಂತಃಕರಣ ವೃತ್ತಿಯನ್ನಿಟ್ಟುಕೊಂಡು ಗೀತೆಯನ್ನು ಓದಿದರೆ, ಗೀತೆಯಿಂದಾಗುವ ಉತ್ತಮ ಫಲವು ಆಗಲಾರದು. ಅರ್ಜುನನ ವೃತ್ತಿಗಳಂತಹ ವೃತ್ತಿಗಳನ್ನು ಸಂಪಾದಿಸಿಕೊಂಡು ಗೀತೆಗೆ ಕೈಹಾಕಿರಿ ಎಂದು ಸೂಚಿಸುವುದಕ್ಕಾಗಿ, ಗೀತೆಯ ಆರಂಭದಲ್ಲಿ ಧೃತರಾಷ್ಟ್ರನನ್ನು ತಂದು ಕೂರಿಸಿದ್ದಾರೆ.

ಇನ್ನು ಪ್ರಥಮ ಶ್ಲೋಕದ ವಿಚಾರವನ್ನು ಸ್ವಲ್ಪ ಆಳವಾಗಿ ನೋಡೋಣ.

ಕುರುಡ ರಾಜನ ಶೋಕದಿಂದ ಮೊದಲನೆಯ ಶ್ಲೋಕವು ಆರಂಭವಾಗುತ್ತದೆ. ಧೃತರಾಷ್ಟ್ರನು ಸಂಜಯನನ್ನು ಕುರಿತು "ಧರ್ಮ ಕ್ಷೇತ್ರವಾದ ಕುರುಕ್ಷೇತ್ರದಲ್ಲಿ, ಯುದ್ಧಕ್ಕಾಗಿ ಒಂದು ಸ್ಥಾನದಲ್ಲಿ ಸೇರಿದ ನನ್ನವರಾದ ಕೌರವರೂ, ಪಾಂಡುಪುತ್ರರಾದ ಧರ್ಮರಾಜಾದಿಗಳೂ ಏನು ಮಾಡಿದರು?" ಎಂಬುದು ಧೃತರಾಷ್ಟ್ರನ ಪ್ರಶ್ನೆ.

ಮಮಕಾರಬದ್ಧನೂ, ಪುತ್ರ ಮೋಹದಿಂದ ಅಂಧನೂ ಆದ ಧೃತರಾಷ್ಟ್ರನು ಈ ಪ್ರಶ್ನೆ ಮಾಡುವುದರಲ್ಲಿ ಒಂದು ಅಂತರಾರ್ಥ ಉಂಟೆಂತಲೂ, ಈ ಪ್ರಶ್ನೆಯು ಅವನ ವ್ಯಗ್ರ ಚಿತ್ತವನ್ನು ಪ್ರತಿಬಿಂಬಿಸುವುದೆಂದೂ ತಿಳಿದುಕೊಳ್ಳಬಹುದು.

ತಿಂದ ಪದಾರ್ಥದ ತೇಗೆ ಬರುವಂತೆ ಮಾನವನ ಹೃದಯದ ಪರಿಸ್ಥಿತಿಗನುಸಾರವಾಗಿಯೇ ಅವನ ಬಾಯಿಂದ ಮಾತುಗಳು ಹೊರಡುತ್ತವೆ. ಆಡುವ ಮಾತುಗಳ ಅರ್ಥವನ್ನು ಗ್ರಹಿಸುವುದರ ಜೊತೆಗೆ ಬುದ್ಧಿವಂತರಾದವರು, ಮಾತುಗಳ ದ್ವಾರಾ ಮನುಷ್ಯನ ಅರ್ಥವನ್ನೇ ಗ್ರಹಿಸುತ್ತಾರೆ. "ಮುಖವು ಹೃದಯದ ಭಾವವನ್ನು ತೋರಿಸುವ ಕನ್ನಡಿ" ಎಂಬಂತೆ, ಧೃತರಾಷ್ಟ್ರನ ಈ ಪ್ರಶ್ನೆಯು ಅವನ ಹೃದಯವನ್ನು ಇದ್ದದ್ದಿದ್ದಂತೆ ತೋರಿಸುತ್ತದೆ.

ಕೌರವರನ್ನು ಕುರಿತು ಮಾತನಾಡುವಾಗ "ಮಾಮಕಾ" ಎಂದು ಹೇಳಿರುವುದರಿಂದ ಧೃತರಾಷ್ಟ್ರನಲ್ಲಿರುವ ಮಮಕಾರ ಬುದ್ಧಿಯು ಸ್ಪಷ್ಟವಾಗುತ್ತದೆ. 'ಮಾಮಕ'ವೆಂದರೆ 'ನನ್ನವರು' ಎಂದರ್ಥ. ಕೌರವ ಪಾಂಡವರಿಬ್ಬರೂ ತನ್ನವರೇ ಆಗಿರುವಾಗ,

ಕೌರವರನ್ನು ಮಾತ್ರ ತನ್ನವರೆಂದು ಹೇಳುವುದು ಅಥವ ಸಂಕುಚಿತ ಬುದ್ಧಿಯ ನಿದರ್ಶನ.

ಇನ್ನು "ಸಮವೇತಾಯುಯುತ್ಸವಃ" ಎಂಬುದನ್ನು ನೋಡೋಣ. ಯುದ್ಧ ಕ್ಕಾಗಿ ಸೇರಿದವರು ಯುದ್ಧವನ್ನೇ ಮಾಡುತ್ತಾರೆಂಬುದು ಎಲ್ಲರಿಗೂ ತಿಳಿದ ವಿಷಯ. ಹೀಗಿರುವಾಗ, "ಏನು ಮಾಡಿದರು" ಎಂದು ಧೃತರಾಷ್ಟ್ರನು ಸಂಜಯನನ್ನು ಕೇಳುವು ದರ ಅಂತರ್ಯವೇನು? ಯುದ್ಧಕ್ಕೆ ಸೇರಿರುವವರು ಯುದ್ಧವನ್ನೇ ಮಾಡುವರಲ್ಲದೆ, ಸಮಾರಾಧನೆಗೆ ಕೂಡುತ್ತಾರೆಯೇ? ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯುದ್ಧವು ಜರುಗಿತೋ ಇಲ್ಲವೋ, ಏನೇನು ವಿಕಟ ಸನ್ನಿವೇಶಗಳು ಸಂಭವಿಸಿರಬಹುದೋ ಎಂಬುದು ಆತನ ಶಂಕೆ. ಏಕೆಂದರೆ, ಯುದ್ಧಕ್ಕೆ ಸೇರಿದ ಭೂಮಿಯು ಕೇವಲ ಕುರು ಕ್ಷೇತ್ರವಲ್ಲ, ಧರ್ಮಕ್ಷೇತ್ರವಾದ ಕುರುಕ್ಷೇತ್ರ. ಆದುದರಿಂದ ಈ ಶಂಕೆಗೆ ಅವಕಾಶ ವುಂಟಾಗಿದೆ. ಆ ಪ್ರದೇಶದಲ್ಲಿ ಅನಾದಿ ಕಾಲದಿಂದಲೂ ಮಹರ್ಷಿಗಳು ತಪಸ್ಸನ್ನು ಮಾಡಿರುತ್ತಾರೆ. ರಾಜರ್ಷಿಗಳು ಯಜ್ಞ ಯಾಗಾದಿಗಳನ್ನು ಮಾಡಿರುತ್ತಾರೆ. ಆದುದರಿಂದಲೇ ಅದು ಧರ್ಮಕ್ಷೇತ್ರ. ವರ್ತಮಾನ ಕಾಲದಲ್ಲಿ ಅಂಥ ಧರ್ಮ ಕಾರ್ಯ ಗಳು ಜರುಗುವುದು ತೋರಿಬರದಿದ್ದರೂ, ಭೂತ ಕಾಲದಲ್ಲಿ ಜರುಗಿದ ಪುಣ್ಯ ಸಂಸ್ಕಾರ ಗಳು ಆ ಪ್ರದೇಶದಲ್ಲಿ ಸೂಕ್ಷ್ಮವಾಗಿ ಇದ್ದೇ ಇರುತ್ತವೆ. ಹಿಂದಿನಿಂದ 'ಕಸ್ತೂರಿ' ಯನ್ನು ಹಾಕುತ್ತಾ ಬಂದ ಡಬ್ಬಿಯಲ್ಲಿ ಕಸ್ತೂರಿಯು ಮುಗಿದು ಹೋದರೂ, ಅದರ ವಾಸನೆಯು ಉಳಿದಿರುತ್ತದೆಂಬುದು ಸ್ಪಷ್ಟವೇ. ಇಂಗನ್ನು ಕಟ್ಟಿದ ಬಟ್ಟೆಗೆ ಇಂಗಿನ ವಾಸನೆಯು ಅಂಟಿಕೊಂಡಿರುವುದು ಸಹಜವಲ್ಲವೆ? ಇದೇ ವಿಧವಾಗಿ ಕುರುಕ್ಷೇತ್ರವು ಧಾರ್ಮಿಕ ಸಂಸ್ಕಾರಗಳಿಂದ ಕೂಡಿರುವುದರಿಂದ ಧರ್ಮಕ್ಷೇತ್ರವೆನಿಸಿಕೊಳ್ಳುವುದರಲ್ಲಿ ಯಾವ ಸಂದೇಹವೂ ಇಲ್ಲ.

ಧರ್ಮಕ್ಷೇತ್ರದಲ್ಲಿ ಒಂದು ವಿಶೇಷ. ಅದು ಏನೆಂದರೆ—ಅಧಾರ್ಮಿಕ ವ್ಯಕ್ತಿ ಗಳು ಅದರಲ್ಲಿ ಪ್ರವೇಶ ಮಾಡಿದರೆ ತಾತ್ಕಾಲಿಕವಾಗಿಯಾದರೂ ಅಲ್ಪ ಸ್ವಲ್ಪ ಧರ್ಮ ಗುಣವು ಅವರಲ್ಲಿ ಪ್ರವೇಶ ಮಾಡುತ್ತದೆ. ಅಲ್ಪ ಸ್ವಲ್ಪ ಧರ್ಮ ಸಂಸ್ಕಾರವುಳ್ಳ ವ್ಯಕ್ತಿಗಳು ಅದರಲ್ಲಿ ಪ್ರವೇಶ ಮಾಡಿದರೆ ಅವರ ಧರ್ಮ ಗುಣಗಳು ಮತ್ತಷ್ಟು ಅಭಿ ವೃದ್ಧಿಯಾಗುತ್ತವೆ. ಧರ್ಮಕ್ಷೇತ್ರದ ಪ್ರಭಾವದಿಂದ, ಅಧಾರ್ಮಿಕರಾದ ದುರ್ಯೋಧ ನಾದಿಗಳಿಗೆ ಧರ್ಮಬುದ್ಧಿಯುಂಟಾಗಿ, ರಾಜ್ಯದ ಅರ್ಧ ಭಾಗವನ್ನು ಪಾಂಡವರಿಗೆ ಒಪ್ಪಿಸಿ, ಯುದ್ಧವನ್ನೇ ಮಾಡದೆ ಬಿಟ್ಟಿರಬಹುದೆಂದು ಆ ಕುರುಡನ ಶಂಕೆ. ಆದರೆ ಧರ್ಮಕ್ಷೇತ್ರವು ಅದರ ಮೇಲ್ಲೆ ತನ್ನ ಪ್ರಭಾವವನ್ನು ಬೀರಲಾರದೆ ಹೋಯಿತು. ಹೇಗೆಂದರೆ—ಅಯಸ್ಕಾಂತದಲ್ಲಿ ಸೂಜಿಗಳನ್ನು ಆಕರ್ಷಿಸುವ ಶಕ್ತಿ ಇದ್ದರೂ ಸೂಜಿಗೆ ತುಕ್ಕು ಹಿಡಿದಿದ್ದರೆ ಅದನ್ನು ಆಕರ್ಷಿಸಲಾರದು. ಮತ್ತು ಪರುಷವೇದಿಗೆ ಕಬ್ಬಿಣ



ವನ್ನು ಬಂಗಾರ ಮಾಡುವ ಶಕ್ತಿ ಇದ್ದರೂ ತುಕ್ಕು ಹಿಡಿದ ಕಬ್ಬಿಣವನ್ನು ಬಂಗಾರ ಮಾಡಲಾರದು. ಇದೇ ರೀತಿ ಧರ್ಮ ಕ್ಷೇತ್ರದ ಪ್ರಭಾವವು ತನ್ನ ಮಕ್ಕಳನ್ನು ಕದ ಲಿಸಲಾಗದೆಂದು ಪಾಪದ ಆ ಕುರುಡನಿಗೇನು ಗೊತ್ತು?

ಇಲ್ಲವೇ, ಧರ್ಮಕ್ಷೇತ್ರದಲ್ಲಿ ಪ್ರವೇಶ ಮಾಡುತ್ತಲೇ ಪಾಂಡವರ ಧರ್ಮ ಬುದ್ಧಿಯು ಅಭಿವೃದ್ಧಿಯಾಗಿ ಯುದ್ಧವು ಹಿಂಸಾತ್ಮಕವೆಂದು ತಿಳಿದು, ಯುದ್ಧವನ್ನು ಮಾಡದೆ ರಾಜ್ಯವನ್ನೆಲ್ಲಾ ತನ್ನ ಮಕ್ಕಳಿಗೆ ಒಪ್ಪಿಸಿ ಅವರು ತ್ಯಾಗಿಗಳಾಗಿ, ವಿರಾಗಿ ಗಳಾಗಿ ಹೊರಟು ಹೋದರೇನೋ ಎಂದು ಮತ್ತೊಂದು ಸಂದೇಹ. ಈ ಎಲ್ಲಾ ಊಹಾಪೋಹಗಳಿಂದ ಅವನ ಬುದ್ಧಿಯು ಕದಡಿ, ವಿವೇಕ ಶಕ್ತಿಯನ್ನು ಕಳೆದುಕೊಂಡು, ಯುದ್ಧವು ಹೇಗೆ ಜರುಗಿತು ಎಂದು ಕೇಳುವುದಕ್ಕೆ ಬದಲಾಗಿ ಏನು ಮಾಡಿದರು ಎಂದು ಕೇಳಿದನು.

ಧರ್ಮಕ್ಷೇತ್ರ ಕುರುಕ್ಷೇತ್ರವೆಂಬ ವಿಷಯವನ್ನು ಮತ್ತಷ್ಟು ಆಳವಾಗಿ ನೋಡೋಣ.

ಕ್ಷೇತ್ರವೆಂದರೆ 'ಹೊಲ'. ಇದು ಎಲ್ಲರಿಗೂ ತಿಳಿದ ವಿಚಾರ. ಶರೀರಕ್ಕೂ ಸು 'ಕ್ಷೇತ್ರ'ವೆಂದು ಹೆಸರು. ಹದಿಮೂರನೆಯ ಅಧ್ಯಾಯದ ಪ್ರಾರಂಭದಲ್ಲಿ ಭಗವಂತನ್ "ಶರೀರಂ-ಕ್ಷೇತ್ರಂ" ಎಂದು ಹೇಳಿದ್ದಾನೆ. "ಕ್ಷತ ತ್ರಾಣಾತ್, ಕ್ಷಯಾತ್, ಕ್ಷರಣಾತ್ ಕ್ಷೇತ್ರವದ್ವಾ ಅಸ್ಮಿನ್ ಕರ್ಮಫಲ ನಿಷ್ಪತ್ತೇಃ ಇತಿ ಕ್ಷೇತ್ರಮ್" ಕ್ಷೇತ್ರಮ್ ಎಂದರೆ ಜೀವನನ್ನು ಕವಚದಂತೆ ಕಾಪಾಡುವುದರಿಂದಲೂ, ನಾಶವಾಗುವ ಸ್ವಭಾವವುಳ್ಳದ್ದಾದ್ದರಿಂದಲೂ, ಮೆಲ್ಲಮೆಲ್ಲಗೆ ಕರಗುವುದಾಗಿಯೂ, ಕರ್ಮಫಲವನ್ನು ಪಡೆದುಕೊಳ್ಳುವ ಸ್ಥಾನವಾದುದರಿಂದಲೂ, ಈ ಶರೀರಕ್ಕೆ 'ಕ್ಷೇತ್ರ'ವೆಂಬ ಹೆಸರು ಉಂಟಾಗಿದೆಯೆಂದು ಭಾಷ್ಯಕಾರರು ತಮ್ಮ ಭಾಷ್ಯದಲ್ಲಿ ಪ್ರತಿಪಾದಿಸಿದ್ದಾರೆ.

ಸೃಷ್ಟಿಯಲ್ಲಿ ಕೆಲವು ಕೇವಲ ಧರ್ಮಕ್ಷೇತ್ರಗಳು ಮತ್ತು ಕೆಲವು ಕೇವಲ ಕುರು ಕ್ಷೇತ್ರಗಳು ಕಂಡು ಬರುತ್ತವೆ. ದೇವತಾ ಶರೀರಗಳು ಕೇವಲ ಧರ್ಮಕ್ಷೇತ್ರಗಳು, ಪುಣ್ಯದ ಅತಿಶಯದಿಂದ ಅವರಿಗೆ ಆ ಜನ್ಮಗಳು ದೊರೆತಿವೆ. ಆದುದರಿಂದ ಅವರು ನಿರಂತರ ಸುಖ ಭೋಗಗಳನ್ನು ಅನುಭವಿಸುತ್ತಾರೆ. ಅಮೃತ ಪಾನ, ಅಪ್ಸರ ಸಹ ವಾಸ, ನಂದನವನ ವಿಹಾರ ಇವು ಅವರಿಗೆ ನಿತ್ಯಭೋಗಗಳು. ಅವರು ಭೋಗ ಜೀವಿ ಗಳು. ಹಿಂದೆ ಮಾಡಿದ ಕರ್ಮಫಲವನ್ನು ಈಗ ಅನುಭವಿಸುವರೇ ವಿನಹ ಹೊಸ ಕರ್ಮಗಳನ್ನು ಮಾಡುವ ಅವಕಾಶವು ಅವರಿಗಿರುವುದಿಲ್ಲ. ಮುಕ್ತಿಯನ್ನು ಪಡೆಯು ವುದು ದೇವಲೋಕದಲ್ಲಿ ಆಗಲಾಗದು. ಅದ್ದರಿಂದಲೇ ಖಟ್ವಾಂಗ ಚಕ್ರವರ್ತಿಯು ಅವಸಾನ ಕಾಲದಲ್ಲಿ ಮಾನವ ಲೋಕವನ್ನು ಸೇರಬೇಕಾಯಿತು. ಪಶು ಜನ್ಮಗಳು ಕೇವಲ ಕುರುಕ್ಷೇತ್ರಗಳು. 'ಕುರು' ಎಂದರೆ ಕರ್ಮ. ಕುರುಕ್ಷೇತ್ರವೆಂದರೂ ಕರ್ಮ

ಕ್ಷೇತ್ರವೆಂದರೂ ಒಂದೇ ಅರ್ಥ. ಕೇವಲ ಪಾಪ ಕರ್ಮದಿಂದ ಈ ಜನ್ಮಗಳು ಪ್ರಾಪ್ತಿಯಾಗಿರುತ್ತವೆ. ಗತಜನ್ಮದಲ್ಲಿ ಮಾಡಿದ ಪಾಪದ ಫಲವಾದ ದುಃಖವನ್ನು ಅನುಭವಿಸುವುದನ್ನು ಬಿಟ್ಟರೆ ನೂತನ ಕರ್ಮವನ್ನು ಮಾಡ ತಕ್ಕ ಅವಕಾಶವು ಈ ಪಶುಜನ್ಮಗಳಿಗೂ ಇಲ್ಲ. ಇವು ಬುದ್ಧಿಯಿಲ್ಲದ ಜನ್ಮಗಳು. ಇವು ಕೂಡ ಕೇವಲ ಭೋಗ ಜನ್ಮಗಳೇ.

ಮಾಡಿದ ಕರ್ಮ ಫಲವನ್ನು ಅನುಭವಿಸುತ್ತಾ, ಹೊಸ ಕರ್ಮವನ್ನು ಮಾಡುವ ಹಕ್ಕು ಮನುಷ್ಯ ಜನ್ಮಕ್ಕಿದೆ. ಆದುದರಿಂದಲೇ ಇದು ಧರ್ಮಕ್ಷೇತ್ರ ಕುರುಕ್ಷೇತ್ರ. ಇದೇ ಕೌರವ ಪಾಂಡವರ ಯುದ್ಧ ಭೂಮಿ. ದೈವೀ ಗುಣಗಳಿಗೂ, ಅಸುರೀ ಗುಣಗಳಿಗೂ ಹೋರಾಟವು ನಡೆಯುವುದು ಇಲ್ಲಿಯೇ. ದೇವ ಜನ್ಮದಲ್ಲಿಯೇ ಆಗಲಿ, ಪಶು ಜನ್ಮದಲ್ಲಿಯೇ ಆಗಲಿ ಯುದ್ಧವು ಸಂಭವಿಸುವುದಿಲ್ಲ. ಅವು ಪ್ರಕೃತಿಯಿಂದ ದೊರೆತದ್ದೇ ಪ್ರಸಾದವೆಂದು ಜೀವಿಸುವ ಪರತಂತ್ರ ಜನ್ಮಗಳು.

ಪ್ರಕೃತಿಯನ್ನು ಎದುರಿಸಿ ಹೋರಾಡುವ ಪೌರುಷ ಶಕ್ತಿಯಿರುವುದು ಮನುಷ್ಯ ಜನ್ಮದಲ್ಲಿ ಮಾತ್ರ. ಇದೇ ಧರ್ಮಕ್ಷೇತ್ರ, ಇದೇ ಕುರುಕ್ಷೇತ್ರ.

ಯೋಗಶಾತ್ರ ಪದ್ಧತಿಯನ್ನನುಸರಿಸಿ, ಈ ಶರೀರದಲ್ಲಿಯೇ ಧರ್ಮಕ್ಷೇತ್ರವೂ ಇದೆ, ಕುರುಕ್ಷೇತ್ರವೂ ಇದೆ. ಇಷ್ಟೇ ಅಲ್ಲ, ಧರ್ಮಕ್ಷೇತ್ರ ಕುರುಕ್ಷೇತ್ರವನ್ನು ಸಹ ಇಲ್ಲೇ ನೋಡಬಹುದು.

ಮೂಲಾಧಾರ ಚಕ್ರಕ್ಕಿಂತ ಕೆಳಭಾಗವು ಕೇವಲ ಕುರುಕ್ಷೇತ್ರ.

ಆಗ್ನೇಯ ಚಕ್ರಕ್ಕಿಂತ ಮೇಲು ಭಾಗವು ಕೇವಲ ಧರ್ಮಕ್ಷೇತ್ರ.

ಈ ಎರಡರ ಮಧ್ಯಭಾಗವು ಅಂದರೆ ಮೂಲಾಧಾರಕ್ಕಿಂತ ಮೇಲೆ, ಆಗ್ನೇಯಕ್ಕಿಂತ ಕೆಳಗೆ ಇರುವ ಭಾಗವು ಧರ್ಮಕ್ಷೇತ್ರ ಕುರುಕ್ಷೇತ್ರ. ಯೋಗಸಾಧನ ರೂಪವಾದ ಯುದ್ಧವು ಕೇವಲ ಕುರುಕ್ಷೇತ್ರದಲ್ಲಿಯೂ ನಡೆಯುವುದಿಲ್ಲ. ಕೇವಲ ಧರ್ಮಕ್ಷೇತ್ರದಲ್ಲಿಯೂ ನಡೆಯುವುದಿಲ್ಲ. ಮೂಢಾವಸ್ಥಾ, ಒಂದು ಶಾಂತಾವಸ್ಥಾನ. ಸಂಚಲನವು ಈ ಎರಡರಲ್ಲಿಯೂ ಸಂಭವಿಸುವುದಿಲ್ಲ. ಮಧ್ಯದಲ್ಲಿರುವ ಧರ್ಮಕ್ಷೇತ್ರ ಕುರುಕ್ಷೇತ್ರದಲ್ಲಿಯೇ ಯುದ್ಧವು ನಡೆಯುತ್ತಿರುತ್ತದೆ. ಇದೇ "ಸಾಧನಕ್ಷೇತ್ರ"ವೆಂದು ಯೋಗಿಗಳ ಅಭಿಪ್ರಾಯ.

ಧರ್ಮಕ್ಷೇತ್ರದಲ್ಲಿ ಅಸುರೀಗುಣವೆಂಬ ಕೌರವರಿಗೂ ದೈವೀಗುಣವೆಂಬ ಪಾಂಡವರಿಗೂ ಯುದ್ಧವು ನಿತ್ಯ ನಿರಂತರ ಜರುಗುತ್ತಿರುತ್ತದೆ.

ಇನ್ನು ಸಂಜಯನೆಂದರೆ ಯಾರು? 'ಸಂ-ಜಯಃ'—ಸಮಸ್ತ ಇಂದ್ರಿಯಗಳನ್ನೂ ಜಯಿಸಿ ಗುರುಕೃಪೆಯಿಂದ ಜ್ಞಾನನೇತ್ರವನ್ನು ಪಡೆದುಕೊಂಡಿರುವ ಮಹಾನುಭಾವನೇ ಸಂಜಯನು.

**ಸಂಬಂಧ:** ಧೃತರಾಷ್ಟ್ರನ ಪ್ರಶ್ನೆಗೆ ಮಹಾತ್ಮನಾದ ಸಂಜಯನು ಏನು ಸಮಾಧಾನ ಹೇಳುತ್ತಾನೆಂಬುದನ್ನು ಮುಂದಿನ ಶ್ಲೋಕದಲ್ಲಿ ನೋಡೋಣ. (ಸಶೇಷ)



# ವಚನಕಾರರು ವೇದ ಸಂಸ್ಕೃತಿಯ ವಿರೋಧಿಗಳೆ?

—ಷಣ್ಮುಖಯ್ಯ ಅಕ್ಕೂರಮಠ, ಎಂ. ಎ., 'ಸಾಹಿತ್ಯ ರತ್ನ'

ವಚನಗಳೆಂದರೆ ಸಾಹಿತ್ಯದ ಒಂದು ಪ್ರಾಕಾರವೆಂದೂ, ಲಿಂಗಾಯತ ಧರ್ಮದ 'ಸಾಹಿತ್ಯ'ವೆಂದೂ ಸಾಮಾನ್ಯವಾಗಿ ಎಲ್ಲರೂ ತಿಳಿದ ಸಂಗತಿಯಾಗಿದೆ. ವಚನಗಳಲ್ಲಿ ಪ್ರಧಾನವಾಗಿ ಲಿಂಗವಂತ ಸಂಸ್ಕೃತಿಯ ನಿರೂಪಣೆ ಇದ್ದರೂ, ಅವುಗಳಲ್ಲಿ ಗೌಣವಾಗಿ (ಪರ ಅಥವಾ ವಿರೋಧವಾಗಿ) ಜೈನ-ವೈದಿಕ, ಮೊದಲಾದ ಸಂಸ್ಕೃತಿಗಳನ್ನು ಕಾಣಬಹುದು. ಅಷ್ಟೇ ಅಲ್ಲ; ಮಾನವ ಸಂಸ್ಕೃತಿಯ ಮಹೋನ್ನತ ತತ್ವಗಳನ್ನೂ ವಚನಗಳಲ್ಲಿ ಕಾಣಬಹುದಾಗಿದೆ. ಅನುಭಾವಿಗಳಾದ ಶರಣರ ತತ್ವಗಳನ್ನೇ ವಚನಗಳು ಹೊತ್ತು ನಿಂತಿವೆ. ಅವು ಎಲ್ಲಾ ದೇಶ, ಹಾಗೂ ಕಾಲಕ್ಕೂ ಅನ್ವಯಿಸುವ ಸಾರ್ವಕಾಲಿಕ 'ಸತ್ಯ'ವನ್ನು ನಿರೂಪಿಸುತ್ತವೆ. ವಚನಗಳು 'ಕನ್ನಡದ ಉಪನಿಷತ್ತು'ಗಳೆಂಬ ಗೌರವಕ್ಕೆ ಪಾತ್ರವಾಗಿವೆಯಲ್ಲದೆ, ವಚನ ಸಾಹಿತ್ಯ ಜಗತ್ತಿನ ಯಾವುದೇ 'ಅನುಭಾವ' ಸಾಹಿತ್ಯಕ್ಕಿಂತಲೂ ವೈಶಿಷ್ಟ್ಯಪೂರ್ಣವಾಗಿದೆ ಎಂದು ಹೇಳಬಹುದು.

ಇಂದು ಭಾರತವು ಹಿಂದು, ಜೈನ, ಬೌದ್ಧ, ಶೈವ, ವೈಷ್ಣವ, ಲಿಂಗಾಯತ, ಸಿಖ್, ವೈದಿಕ, ಚಾರ್ವಾಕ ಮೊದಲಾದ ಎಲ್ಲ ಧರ್ಮ ಸಂಸ್ಕೃತಿಗಳ ಸಂಗಮವಾಗಿದೆ. ಸನಾತನ ವೈದಿಕ ಧರ್ಮದ ಅನುಯಾಯಿಗಳ ಸಂಕುಚಿತ ದೃಷ್ಟಿ, ಮೇಲು-ಕೀಳೆಂಬ, ಬ್ರಾಹ್ಮಣ-ಶೂದ್ರರೆಂಬ, ಕೀಳು ಕುಬ್ಜ ಕಲ್ಪನೆಗಳಿಂದಾಗಿ, ಹಿಂದು ಸಮಾಜವು ಒಡೆದು ವಿಚ್ಛಿದ್ರವಾಗಿ ಬೇರೆ-ಬೇರೆ ಸಂಸ್ಕೃತಿಗಳ ಸೃಷ್ಟಿಗೆ ಕಾರಣವಾಯಿತು. ಶ್ರೀರಾಮಚಂದ್ರನಿಗೆ ಜನಿಸಿದ ಲವ-ಕುಶರು ತಂದೆಯೊಂದಿಗೆ ಯುದ್ಧ ಮಾಡಿದಂತೆ, ಸನಾತನ ಧರ್ಮದ ಸಂತಾನಗಳಾದ ಬೇರೆ-ಬೇರೆ ಧರ್ಮಗಳು ಅದರ ಲೋಪ-ದೋಷಗಳನ್ನೆತ್ತಿ ಹೋರಾಡಿ ಅದರ ಪರಿಷ್ಕಾರಕ್ಕೆ ಪ್ರಯತ್ನಿಸಿದವು. ಉತ್ತರ ಭಾರತದಲ್ಲಿ ಜೈನ-ಬೌದ್ಧ ಮತಗಳು ಹಿಂದೂ ಧರ್ಮದ ಕಕ್ಷೆಯ ಹೊರಗೆ ಹೋಗಿ ನಿಂತು ಹೋರಾಡಿದರೆ, 'ಲಿಂಗಾಯತ ಧರ್ಮ'ವು ಹಿಂದೂ ಕಕ್ಷೆಯ ಒಳಗೇ ನಿಂತು ಅದರ ಸುಧಾರಣೆಗೆ ಶ್ರಮಿಸಿತು. ಅಷ್ಟೇ ಅಲ್ಲ; ಹಿಂದೂ ಧರ್ಮದ ಲೋಪ-ದೋಷಗಳನ್ನು ಸೂಚಿಸಿ ಪರಿಹಾರ ಸೂತ್ರವನ್ನು ಕಂಡು ಹಿಡಿಯಿತು.

ಈ ದೃಷ್ಟಿಯಿಂದ 'ಲಿಂಗಾಯತ' ಧರ್ಮವು ಹಿಂದೂ ಪರಂಪರೆಯಲ್ಲಿ ಕ್ರಾಂತಿ ಧರ್ಮವಾಗಿ ಪರಿಣಮಿಸಿತು. ಶರಣರು ಸಂಪೂರ್ಣವಾಗಿ ವೇದ ವಿರೋಧಿಗಳಷ್ಟೇ! ಹೀಗಿರುವಾಗ ಅಲ್ಲಿ ವೈದಿಕ ಸಂಸ್ಕೃತಿ ಎಲ್ಲಿದೆ ಎಂದು ಕೆಲವರಿಗೆ ಕುತೂಹಲ ವಿಸ್ಮಯವಾಗಬಹುದು. ಮತ್ತೆ ಹಲವರಿಗೆ 'ಗುಮಾನಿ'ಯೂ ಆಗಬಹುದು. ಇಂಥ ಕಡೆ

ಭಿನ್ನಾಭಿಪ್ರಾಯಕ್ಕೆ ಅವಕಾಶವಿದ್ದೇ ಇರುತ್ತದೆ. ಅರಿವಿಗೆ (ವಿಚಾರಕ್ಕೆ) ಹತ್ತಾರು
ದಾರಿ; ಅನುಭವಕ್ಕೆ ಒಂದೇ ದಾರಿ, ಆದ್ದರಿಂದ ಈ ಲೇಖನದ ವಿಷಯು ಒಂದು
ವಿಚಾರ ದೃಷ್ಟಿಯಲ್ಲಿದೆ. ಇದೇನು ನಿರ್ಣಯ ಸಿದ್ಧಾಂತವಲ್ಲ. ಆದರೆ ಜಗತ್ತಿ
ನಲ್ಲಿ ವಿಶಾಲ ತತ್ತ್ವದ ಉದಾತ್ತ ಭಾವದ ಹಿನ್ನೆಲೆಯಲ್ಲಿ ನೆಲೆ ನಿಂತು ಯಾವುದೇ
ಧರ್ಮದಲ್ಲಿ ಎಲ್ಲ ಬಗೆಯ ಸಂಸ್ಕೃತಿಯನ್ನು ಗುರುತಿಸುವುದು ಕಷ್ಟಸಾಧ್ಯವೇ
ನಲ್ಲ. ಆದರೆ ಇದಕ್ಕೆಲ್ಲ ಪರಧರ್ಮ ಸಹಿಷ್ಣುತೆ, ಗುಣಗ್ರಹಣ ದೃಷ್ಟಿ, ಉದಾರ
ಮನಸ್ಸು ಬೇಕು.

ಹಾಗಾದರೆ ಸಂಸ್ಕೃತಿ ಎಂದರೇನು? ಸಂಸ್ಕೃತಿ (culture) ಯನ್ನು ಕುರಿತು
ಸಾಕು ಬೇಕಾದಷ್ಟು ವ್ಯಾಖ್ಯಾನಗಳಿವೆ. ಅವೆಲ್ಲವುಗಳ ವಿವರಣೆ ಇಲ್ಲಿ ಅಪ್ರಸ್ತುತ.
'ಜೀವನದ ಉತ್ತಮೋತ್ತಮ ವಿಧಾನವೇ' ಸಂಸ್ಕೃತಿಯೆಂದು ಸ್ಥೂಲವಾಗಿ ಹೇಳ
ಬಹುದಾಗಿದೆ. ಮಾಥ್ಯೂ ಆರ್ನಾಲ್ಡ್‌ರ ಅಭಿಪ್ರಾಯದಲ್ಲಿ ಸಂಸ್ಕೃತಿಗೆ ವ್ಯಾಖ್ಯಾನ
ಇಂತಿದೆ.

"Culture is then properly described not as having
its origin in curiosity but as having its origin in the
love of perfection; it is a study of perfection" ಪರಿ
ಪೂರ್ಣ ಜೀವನದತ್ತ ಸಾಗುವ ಅಭ್ಯಾಸವೇ ಸಂಸ್ಕೃತಿಯಾಗಿದೆ. 'ಉತ್ತಮ ನಡ
ವಳಿಕೆಯನ್ನೇ' ಸಾಮಾನ್ಯವಾಗಿ ಸಂಸ್ಕೃತಿ ಎಂದು ಕರೆಯುತ್ತಾರೆ. ಇದರಲ್ಲಿ ಜನಾಂ
ಗದ, ಆಚಾರ, ವಿಚಾರ, ಸಂಪ್ರದಾಯ, ನಂಬಿಕೆ ಮೊದಲಾದ 'ಮೌಲ್ಯ'ಗಳ ಸಂಗಮ
ವಿರುತ್ತದೆ. ಇದು ಸಾಮಾನ್ಯವಾಗಿ ಎಲ್ಲ ಸಂಸ್ಕೃತಿಗಳಿಗೂ ಅನ್ವಯವಾಗುತ್ತದೆ.
ವೈದಿಕ ಸಂಸ್ಕೃತಿಯನ್ನು ಕುರಿತು ಹೇಳುವುದಾದರೆ—ವೇದಗಳನ್ನೇ ಧಾರ್ಮಿಕ
ಪ್ರಮಾಣ ಗ್ರಂಥಗಳೆಂದು ಭಾವಿಸಿ ಅವುಗಳ ಹಿನ್ನೆಲೆಯಲ್ಲಿ, ಧಾರ್ಮಿಕ ಸಂಪ್ರದಾಯ
ಗಳನ್ನೂ (ಕರ್ಮ), ಆಚರಿಸುವ ಹಾಗೂ ವೇದೋಕ್ತ ವಿಧಿ-ನಿಷೇಧಗಳನ್ನೂ ಪರಿಪಾಲಿ
ಸುವ ಜೀವನ ವಿಧಾನಕ್ಕೆ ಸ್ಥೂಲವಾಗಿ ವೈದಿಕ ಸಂಸ್ಕೃತಿ ಎಂದು ಕರೆಯಬಹುದಾಗಿದೆ.
ಈ ವೈದಿಕ ಸಂಸ್ಕೃತಿ ಕೆಲವು ವಿಶಿಷ್ಟ ಆಚರಣೆಗಳಿಂದ ಒಂದು ಗುಂಪಿನ ಜನಾಂಗಕ್ಕೆ
ಅನ್ವಯಿಸಿದರೂ ಅದರ ಕೆಲವು ಉದಾತ್ತ ತತ್ತ್ವಗಳು ಸಕಲ ಮಾನವರಿಗೂ ಅನ್ವಯಿ
ಸದೇ ಇರವು. ಇಂಥ ವೈದಿಕ ಜೀವನ ವಿಧಾನದ ಸಂಸ್ಕೃತಿಯನ್ನು ಸಮಗ್ರ ರೂಪ
ದಲ್ಲಿ ಅಲ್ಲವಾದರೂ; ಅಂಶ ರೂಪದಲ್ಲಾದರೂ ವಚನಗಳಲ್ಲಿ ಕಾಣಬಹುದಾಗಿದೆ.
ವೇದದಲ್ಲಿ ಎರಡು ಭಾಗಗಳಿವೆ. ಒಂದು ಜ್ಞಾನ ಕಾಂಡ, ಮತ್ತೊಂದು ಕರ್ಮ ಕಾಂಡ.
ಶರಣ ಧರ್ಮದ ವಚನಕಾರರು ವೇದದ ಕರ್ಮ ಕಾಂಡವನ್ನು ಖಂಡಿಸಿ, ಅದರ ಜ್ಞಾನ
ಕಾಂಡವನ್ನು ಮಾತ್ರ ಒಪ್ಪುತ್ತಾರೆ. ಕರ್ಮ ಕಾಂಡದಲ್ಲಿ ಯಜ್ಞ ಯಾಗ ಮತ್ತು ಅದ
ರಲ್ಲಿ ಪಶುವಧೆಯು ಬೋಧಿತವಾಗುವುದರಿಂದ ಭೂತದಯೆಯುಳ್ಳ ಹಾಗೂ ಸಕಲ



ಜೀವಾತ್ಮರಿಗೆ ಲೇಸನ್ನೆ ಬಯಸುವ ಶ್ರೀ ಬಸವಾದಿ ಶಿವಶರಣರು ಹಿಂಸಾ ಕಾಂಡದ
ಕರ್ಮ ಕಾಂಡವನ್ನು ಅಲ್ಲಗಳೆದು ಜ್ಞಾನ ಕಾಂಡವನ್ನು ಮಾತ್ರ ಒಪ್ಪಿದರು. ಅವರ
ದೃಷ್ಟಿಯಲ್ಲಿ ಯಜ್ಞಯಾಗಾದಿಗಳಲ್ಲಿನ 'ಪಶು'ವಧೆಯು ಅವೈದಿಕ ಸಂಸ್ಕೃತಿಯಾಗಿದೆ.
ಆಚರಿಸುವವರು ಅಸಂಸ್ಕೃತರೂ, ಅನಾಮಿಕರೂ ಆಗಿದ್ದಾರೆ. ಶರಣರು ಸಂಪೂರ್ಣ
ವಾಗಿ ವೇದ ವಿರೋಧಿಗಳೆಂದು ಕೆಲವರ ಗ್ರಹಿಕೆಯಾಗಿದೆ. ಹಾಗೆ ಭಾವಿಸುವುದು
ಶುದ್ಧ ತಪ್ಪಾದೀತು !

ವೇದದಲ್ಲಿ ಸಹಜವಾಗಿಯೇ 'ಅಹಿಂಸೆ', 'ಜೀವದಯೆ' 'ವರ್ಗರಹಿತ' ಉದಾತ್ತ
ತತ್ತ್ವಗಳು ಪ್ರತಿಪಾದಿತವಾಗಿವೆ. ಕಟ್ಟು ಬಿಚ್ಚಿದ ಕರುಗಳು ಸ್ವಾಭಾವಿಕವಾಗಿ ತಮ್ಮ
ತಾಯಿಯ ಬಳಿಗೆ ಧಾವಿಸುವಂತೆ ವೇದಾರ್ಥಗಳು ಸಹಜವಾಗಿ ಸತ್ಯ-ಅಹಿಂಸೆ, ಸರ್ವ
ಮಾನವ 'ಸಮತಾ' ತತ್ವದತ್ತ ಧಾವಿಸುತ್ತವೆ. ಆದರೆ ಸ್ವಾರ್ಥಿಗಳಾದ ಪಂಡಿತರು
ತಮ್ಮ ಬುದ್ಧಿಯ ಪಾಶದಿಂದ ಅಪಾರ್ಥಗಳೆಂಬ ಗೂಟಕ್ಕೆ ವೇದಾರ್ಥಗಳೆಂಬ ಕರು
ಗಳನ್ನು ಕಟ್ಟಿದ ಮಾತ್ರಕ್ಕೆ ತುರು-ಕರುಗಳ ಸಹಜವಾದ ಸಂಬಂಧವನ್ನು ತಪ್ಪಿಸಲು
ಸಾಧ್ಯವಿಲ್ಲ. ಪ್ರಾಚೀನವೇದದಲ್ಲಿ ಸತ್ಯ-ಅಹಿಂಸೆಯಂತಹ ಉದಾತ್ತ ತತ್ವಗಳಿದ್ದವು.
ಕಾಲಕ್ರಮೇಣ ಆ ತತ್ವಗಳಿಗೆ ತಪ್ಪು-ತಪ್ಪು ವ್ಯಾಖ್ಯಾನಗಳಾದವು. ಸಂಸ್ಕೃತ
ಭಾಷೆ ಒಂದು ರಬ್ಬರ್ ಇದ್ದ ಹಾಗೆ ಎಳೆದಷ್ಟೂ ಎಳೆಯುತ್ತದೆ. ಹಿಗ್ಗಾ-ಮುಗ್ಗಾ
ಎಳೆದು ಅಪಾರ್ಥ ಮಾಡಿ, ಯಜ್ಞ-ಯಾಗಾದಿಗಳಲ್ಲಿ 'ಪಶುಬಲಿ'ಯನ್ನು ಆಚರಿಸುವ
'ದುಷ್ಟ ಪದ್ಧತಿ' ಜಾರಿಗೆ ಬಂತು. 'ಪೂಜೆ'ಯ ನೆಪದಲ್ಲಿ ಜೀವ ಹಿಂಸೆಯನ್ನೂ
ಕಂಡು ಬೇಸರಿಸಿದ ಅನೇಕರು ಅದನ್ನು ಖಂಡಿಸಿರುವದನ್ನು ಉಪನಿಷತ್ತುಗಳಲ್ಲಿಯೂ
ಕಾಣಬಹುದು. ವೈದಿಕ ಗುಂಪಿನಿಂದಲೇ ಸಿಡಿದೆದ್ದು ಬಂದು ನೂತನ ವೈಚಾರಿ
ಪರಂಪರೆಯನ್ನು ಸ್ಥಾಪಿಸಿದ ಬಸವಣ್ಣನವರು ಇಂಥ ಮೂಢ ಆಚರಣೆಯನ್ನು ಖಂ
ಸಲೇ ಬೇಕಾಯಿತು. ತಮಗಿಂತ ಹಿಂದೆ ಮಹಾನುಭಾವರಾದ ಬುದ್ಧ-ಮಹಾವೀರ
ಈ ವಿಷಯವಾಗಿ ಖಂಡಿಸಿದ್ದರು. ಆದರೂ ಈ 'ದುಷ್ಟ ಪದ್ಧತಿ' ವಚನಕಾರರ ಕಾಲ
ದಲ್ಲೂ ದಟ್ಟವಾಗಿ ಚಲಾವಣೆಯಲ್ಲಿತ್ತು. ಇದರ ವಿರುದ್ಧ ವಚನಕಾರರು ಸ್ಪದವಿಲ್ಲ
ಡಲೇ ಬೇಕಾಯಿತು, ಜನಜೀವನದ ಕಲ್ಯಾಣಕ್ಕಾಗಿ, ಲೋಕ ಹಿತಕ್ಕಾಗಿ ಲ್ಲರೂ ಅಧಿ
ಕ್ಕಾಗಿ, ಮಾನವೀಯ ಮೌಲ್ಯಗಳ ಸಂಸ್ಥಾಪನೆಗಾಗಿ. ನಿಜವಾಗಿಯೂ ವೇದದ ಮಂತ್ರ
ಗಳು ಮಾನನೀಯವಾಗಿದ್ದರೂ ಅನೇಕ ಎಡೆಯಲ್ಲಿ ಅವುಗಳ ಸಂಗತಿ—ಎಲ್ಲ
ಗಳನ್ನು ಶರಣರು ಒಪ್ಪಿಕೊಂಡಿದ್ದಾರೆ. ಮತ್ತು ಗೌರವ ಭಾವ ಜ್ಞಯಾಗಾದಿಗಳಲ್ಲಿ
ಗಳಲ್ಲಿ ಅಲ್ಲಲ್ಲಿ-ವೇದದ ಆಧಾರಗಳನ್ನು ಕೊಡುತ್ತಾರೆ. ಕಾರ್ಯದ ಕೀರ್ತಿ

ಹಾಗಾದರೆ ವೇದವೆಂದರೇನು ? ಅದರ ಲಕ್ಷ್ಯವಾವು ದಿಕರಿಂದ ಸೃಷ್ಟಿಗೊಂಡ
ವಿದಂತಿ ಜ್ಞಾನಾ ಜ್ಞಾನಾನಿತಿ ವೇದಾಃ । ದರು ವಿಶ್ವವನ್ನೇ ಆರ್ಯ
ಜ್ಞಾನ-ಅಜ್ಞಾನಗಳ ಪರಿಜ್ಞಾನವೇ ವೇದವಾಗಿ

ಭಿನ್ನಾಭಿಪ್ರಾಯಕ್ಕೆ ಅವಕಾಶವಿದ್ದೇ ಇರುತ್ತದೆ. ಅರಿವಿಗೆ (ವಿಚಾರಕ್ಕೆ) ಹತ್ತಾರು
ದಾರಿ; ಅನುಭವಕ್ಕೆ ಒಂದೇ ದಾರಿ, ಆದ್ದರಿಂದ ಈ ಲೇಖನದ ವಿಷಯ ಒಂದು
ವಿಚಾರ ದೃಷ್ಟಿಯಲ್ಲಿದೆ. ಇದೇನು ನಿರ್ಣಯ ಸಿದ್ಧಾಂತವಲ್ಲ. ಆದರೆ ಜಗತ್ತಿ
ನಲ್ಲಿ ವಿಶಾಲ ತತ್ತ್ವದ ಉದಾತ್ತ ಭಾವದ ಹಿನ್ನೆಲೆಯಲ್ಲಿ ನೆಲೆ ನಿಂತು ಯಾವುದೇ
ಧರ್ಮದಲ್ಲಿ ಎಲ್ಲ ಬಗೆಯ ಸಂಸ್ಕೃತಿಯನ್ನು ಗುರುತಿಸುವುದು ಕಷ್ಟಸಾಧ್ಯವೇ
ನಲ್ಲ. ಆದರೆ ಇದಕ್ಕೆಲ್ಲ ಪರಧರ್ಮ ಸಹಿಷ್ಣುತೆ, ಗುಣಗ್ರಹಣ ದೃಷ್ಟಿ, ಉದಾರ
ಮನಸ್ಸು ಬೇಕು.

ಹಾಗಾದರೆ ಸಂಸ್ಕೃತಿ ಎಂದರೇನು? ಸಂಸ್ಕೃತಿ (culture) ಯನ್ನು ಕುರಿತು
ಸಾಕು ಬೇಕಾದಷ್ಟು ವ್ಯಾಖ್ಯಾನಗಳಿವೆ. ಅವೆಲ್ಲವುಗಳ ವಿವರಣೆ ಇಲ್ಲಿ ಅಪ್ರಸ್ತುತ.
'ಜೀವನದ ಉತ್ತಮೋತ್ತಮ ವಿಧಾನವೇ' ಸಂಸ್ಕೃತಿಯೆಂದು ಸ್ಥೂಲವಾಗಿ ಹೇಳ
ಬಹುದಾಗಿದೆ. ಮಾಥ್ಯೂ ಆರ್ನಾಲ್ಡ್‌ರ ಅಭಿಪ್ರಾಯದಲ್ಲಿ ಸಂಸ್ಕೃತಿಗೆ ವ್ಯಾಖ್ಯಾನ
ಇಂತಿದೆ.

"Culture is then properly described not as having
its origin in curiosity but as having its origin in the
love of perfection; it is a study of perfection" ಪರಿ
ಪೂರ್ಣ ಜೀವನದತ್ತ ಸಾಗುವ ಅಭ್ಯಾಸವೇ ಸಂಸ್ಕೃತಿಯಾಗಿದೆ. 'ಉತ್ತಮ ನಡ
ವಳಿಕೆಯನ್ನೇ' ಸಾಮಾನ್ಯವಾಗಿ ಸಂಸ್ಕೃತಿ ಎಂದು ಕರೆಯುತ್ತಾರೆ. ಇದರಲ್ಲಿ ಜನಾಂ
ಗದ, ಆಚಾರ, ವಿಚಾರ, ಸಂಪ್ರದಾಯ, ನಂಬಿಕೆ ಮೊದಲಾದ 'ಮೌಲ್ಯ'ಗಳ ಸಂಗಮ
ವಿರುತ್ತದೆ. ಇದು ಸಾಮಾನ್ಯವಾಗಿ ಎಲ್ಲ ಸಂಸ್ಕೃತಿಗಳಿಗೂ ಅನ್ವಯವಾಗುತ್ತದೆ.
ವೈದಿಕ ಸಂಸ್ಕೃತಿಯನ್ನು ಕುರಿತು ಹೇಳುವುದಾದರೆ—ವೇದಗಳನ್ನೇ ಧಾರ್ಮಿಕ
ಪ್ರಮಾಣ ಗ್ರಂಥಗಳೆಂದು ಭಾವಿಸಿ ಅವುಗಳ ಹಿನ್ನೆಲೆಯಲ್ಲಿ, ಧಾರ್ಮಿಕ ಸಂಪ್ರದಾಯ
ಗಳನ್ನೂ (ಕರ್ಮ), ಆಚರಿಸುವ ಹಾಗೂ ವೇದೋಕ್ತ ವಿಧಿ-ನಿಷೇಧಗಳನ್ನೂ ಪರಿಪಾಲಿ
ಸುವ ಜೀವನ ವಿಧಾನಕ್ಕೆ ಸ್ಥೂಲವಾಗಿ ವೈದಿಕ ಸಂಸ್ಕೃತಿ ಎಂದು ಕರೆಯಬಹುದಾಗಿದೆ.
ಈ ವೈದಿಕ ಸಂಸ್ಕೃತಿ ಕೆಲವು ವಿಶಿಷ್ಟ ಆಚರಣೆಗಳಿಂದ ಒಂದು ಗುಂಪಿನ ಜನಾಂಗಕ್ಕೆ
ಅನ್ವಯಿಸಿದರೂ ಅದರ ಕೆಲವು ಉದಾತ್ತ ತತ್ತ್ವಗಳು ಸಕಲ ಮಾನವರಿಗೂ ಅನ್ವಯಿ
ಸದೇ ಇರವು. ಇಂಥ ವೈದಿಕ ಜೀವನ ವಿಧಾನದ ಸಂಸ್ಕೃತಿಯನ್ನು ಸಮಗ್ರ ರೂಪ
ದಲ್ಲಿ ಅಲ್ಲವಾದರೂ; ಅಂಶ ರೂಪದಲ್ಲಾದರೂ ವಚನಗಳಲ್ಲಿ ಕಾಣಬಹುದಾಗಿದೆ.
ವೇದದಲ್ಲಿ ಎರಡು ಭಾಗಗಳಿವೆ. ಒಂದು ಜ್ಞಾನ ಕಾಂಡ, ಮತ್ತೊಂದು ಕರ್ಮ ಕಾಂಡ.
ಶರಣ ಧರ್ಮದ ವಚನಕಾರರು ವೇದದ ಕರ್ಮ ಕಾಂಡವನ್ನು ಖಂಡಿಸಿ, ಅದರ ಜ್ಞಾನ
ಕಾಂಡವನ್ನು ಮಾತ್ರ ಒಪ್ಪುತ್ತಾರೆ. ಕರ್ಮ ಕಾಂಡದಲ್ಲಿ ಯಜ್ಞ ಯಾಗ ಮತ್ತು ಅದ
ರಲ್ಲಿ ಪಶುವಧೆಯು ಬೋಧಿತವಾಗುವುದರಿಂದ ಭೂತದಯೆಯುಳ್ಳ ಹಾಗೂ ಸಕಲ



ಜೀವಾತ್ಮರಿಗೆ ಲೇಸನ್ನೆ ಬಯಸುವ ಶ್ರೀ ಬಸವಾದಿ ಶಿವಶರಣರು ಹಿಂಸಾ ಕಾಂಡದ
ಕರ್ಮ ಕಾಂಡವನ್ನು ಅಲ್ಲಗಳೆದು ಜ್ಞಾನ ಕಾಂಡವನ್ನು ಮಾತ್ರ ಒಪ್ಪಿದರು. ಅವರ
ದೃಷ್ಟಿಯಲ್ಲಿ ಯಜ್ಞಯಾಗಾದಿಗಳಲ್ಲಿನ 'ಪಶು'ವಧೆಯು ಅವೈದಿಕ ಸಂಸ್ಕೃತಿಯಾಗಿದೆ.
ಆಚರಿಸುವವರು ಅಸಂಸ್ಕೃತರೂ, ಅನಾಮಿಕರೂ ಆಗಿದ್ದಾರೆ. ಶರಣರು ಸಂಪೂರ್ಣ
ವಾಗಿ ವೇದ ವಿರೋಧಿಗಳೆಂದು ಕೆಲವರ ಗ್ರಹಿಕೆಯಾಗಿದೆ. ಹಾಗೆ ಭಾವಿಸುವುದು
ಶುದ್ಧ ತಪ್ಪಾದೀತು !

ವೇದದಲ್ಲಿ ಸಹಜವಾಗಿಯೇ 'ಅಹಿಂಸೆ', 'ಜೀವದಯೆ' 'ವರ್ಗರಹಿತ' ಉದಾತ್ತ
ತತ್ತ್ವಗಳು ಪ್ರತಿಪಾದಿತವಾಗಿವೆ. ಕಟ್ಟು ಬಿಚ್ಚಿದ ಕರುಗಳು ಸ್ವಾಭಾವಿಕವಾಗಿ ತಮ್ಮ
ತಾಯಿಯ ಬಳಿಗೆ ಧಾವಿಸುವಂತೆ ವೇದಾರ್ಥಗಳು ಸಹಜವಾಗಿ ಸತ್ಯ-ಅಹಿಂಸೆ, ಸರ್ವ
ಮಾನವ 'ಸಮತಾ' ತತ್ತ್ವದತ್ತ ಧಾವಿಸುತ್ತವೆ. ಆದರೆ ಸ್ವಾರ್ಥಿಗಳಾದ ಪಂಡಿತರು
ತಮ್ಮ ಬುದ್ಧಿಯ ಪಾಶದಿಂದ ಅಪಾರ್ಥಗಳೆಂಬ ಗೂಟಕ್ಕೆ ವೇದಾರ್ಥಗಳೆಂಬ ಕರು
ಗಳನ್ನು ಕಟ್ಟಿದ ಮಾತ್ರಕ್ಕೆ ತುರು-ಕರುಗಳ ಸಹಜವಾದ ಸಂಬಂಧವನ್ನು ತಪ್ಪಿಸಲು
ಸಾಧ್ಯವಿಲ್ಲ. ಪ್ರಾಚೀನವೇದದಲ್ಲಿ ಸತ್ಯ-ಅಹಿಂಸೆಯಂತಹ ಉದಾತ್ತ ತತ್ತ್ವಗಳಿದ್ದವು.
ಕಾಲಕ್ರಮೇಣ ಆ ತತ್ತ್ವಗಳಿಗೆ ತಪ್ಪು-ತಪ್ಪು ವ್ಯಾಖ್ಯಾನಗಳಾದವು. ಸಂಸ್ಕೃತ
ಭಾಷೆ ಒಂದು ರಬ್ಬರ್ ಇದ್ದ ಹಾಗೆ ಎಳೆದಷ್ಟೂ ಎಳೆಯುತ್ತದೆ. ಹಿಗ್ಗಾ-ಮುಗ್ಗಾ
ಎಳೆದು ಅಪಾರ್ಥ ಮಾಡಿ, ಯಜ್ಞ-ಯಾಗಾದಿಗಳಲ್ಲಿ 'ಪಶುಬಲಿ'ಯನ್ನು ಆಚರಿಸುವ
'ದುಷ್ಟ ಪದ್ಧತಿ' ಜಾರಿಗೆ ಬಂತು. 'ಪೂಜೆ'ಯ ನೆಪದಲ್ಲಿ ಜೀವ ಹಿಂಸೆಯನ್ನೂ
ಕಂಡು ಬೇಸರಿಸಿದ ಅನೇಕರು ಅದನ್ನು ಖಂಡಿಸಿರುವದನ್ನು ಉಪನಿಷತ್ತುಗಳಲ್ಲಿಯೂ
ಕಾಣಬಹುದು. ವೈದಿಕ ಗುಂಪಿನಿಂದಲೇ ಸಿಡಿದೆದ್ದು ಬಂದು ನೂತನ ವೈಚಾರಿಕ
ಪರಂಪರೆಯನ್ನು ಸ್ಥಾಪಿಸಿದ ಬಸವಣ್ಣನವರು ಇಂಥ ಮೂಢ ಆಚರಣೆಯನ್ನು ಖಂಡಿ
ಸಲೇ ಬೇಕಾಯಿತು. ತಮಗಿಂತ ಹಿಂದೆ ಮಹಾನುಭಾವರಾದ ಬುದ್ಧ-ಮಹಾವೀರರು
ಈ ವಿಷಯವಾಗಿ ಖಂಡಿಸಿದ್ದರು. ಆದರೂ ಈ 'ದುಷ್ಟ ಪದ್ಧತಿ' ವಚನಕಾರರ ಯುಗ
ದಲ್ಲೂ ದಟ್ಟವಾಗಿ ಚಲಾವಣೆಯಲ್ಲಿತ್ತು. ಇದರ ವಿರುದ್ಧ ವಚನಕಾರರು ಹೋರಾ
ಡಲೇ ಬೇಕಾಯಿತು, ಜನಜೀವನದ ಕಲ್ಯಾಣಕ್ಕಾಗಿ, ಲೋಕ ಹಿತಕ್ಕಾಗಿ, ಸತ್ಯದರ್ಶನ
ಕ್ಕಾಗಿ, ಮಾನವೀಯ ಮೌಲ್ಯಗಳ ಸಂಸ್ಥಾಪನೆಗಾಗಿ. ನಿಜವಾಗಿಯೂ ಶರಣರಿಗೂ ವೇದ
ಗಳು ಮಾನನೀಯವಾಗಿದ್ದರೂ ಅನೇಕ ಎಡೆಯಲ್ಲಿ ಅವುಗಳ ಉದಾತ್ತ ತತ್ತ್ವ
ಗಳನ್ನು ಶರಣರು ಒಪ್ಪಿಕೊಂಡಿದ್ದಾರೆ. ಮತ್ತು ಗೌರವ ಭಾವದಿಂದ ತಮ್ಮ ವಚನ
ಗಳಲ್ಲಿ ಅಲ್ಲಲ್ಲಿ-ವೇದದ ಆಧಾರಗಳನ್ನು ಕೊಡುತ್ತಾರೆ.

ಹಾಗಾದರೆ ವೇದವೆಂದರೇನು ? ಅದರ ಲಕ್ಷ್ಯವಾವುದು ?

ವಿದಂತಿ ಜ್ಞಾನಾ ಜ್ಞಾನಾನಿತಿ ವೇದಾಃ ।

ಜ್ಞಾನ-ಅಜ್ಞಾನಗಳ ಪರಿಜ್ಞಾನವೇ ವೇದವಾಗಿದೆ.

ಸಾಯಣರ ಅಭಿಪ್ರಾಯದಲ್ಲಿ :

ಏನಾಭೀಷ್ಟಲಾಭೋ ಅನಿಷ್ಟ ಪರಿಹಾರಃ

ಏವಂ ಧರ್ಮಾದಿಖ್ಯಾಪಕೋ ವೇದಃ

ಇಚ್ಛಿತ ಫಲವನ್ನು ಕೊಟ್ಟು ಅನಿಷ್ಟವನ್ನು ಪರಿಹಾರ ಮಾಡುವ, ಧರ್ಮಾ
ಧರ್ಮಾದಿಗಳನ್ನು ಬೋಧಿಸುವುದೇ ವೇದವೆಂದು ಹೇಳುತ್ತಾರೆ.

ವೇದವನ್ನು ಕೆಲವು ವಿದ್ವಾಂಸರು ಮೂರು ವಿಧವಾಗಿ ವಿಂಗಡಿಸುತ್ತಾರೆ :
ಜ್ಞಾನಕಾಂಡ, ಕರ್ಮಕಾಂಡ, ಹಾಗೂ ಉಪಾಸನಾ ಕಾಂಡಗಳೆಂದು. ವಚನ
ಕಾರರು ತಮ್ಮ ಕಾಲದಲ್ಲಿ ಹಿಂಸೆ, 'ನೀಚೋಚ್ಚ' ಭಾವನೆಗಳನ್ನು ಬೋಧಿಸುತ್ತಿದ್ದ
ವೇದದ ಕರ್ಮ ಕಾಂಡವನ್ನು ಖಂಡಿಸಿ ಉಳಿದ ಎರಡು ಭಾಗಗಳನ್ನು ಪುರಸ್ಕರಿಸಿದರು.
ಈ ದೃಷ್ಟಿಯಿಂದ ನೋಡಿದಾಗ ಭಾರತದಲ್ಲಿಯ ಎಲ್ಲ ಆಸ್ತಿಕ ಮತಗಳೂ ವೇದದ
ಉತ್ತಮಾಂಶವನ್ನು ಆಯ್ದು ತಮಗೆ ಇಷ್ಟ ಬಂದಷ್ಟನ್ನು ಆಚರಣೆಯಲ್ಲಿ ಅಳವಡಿಸಿ
ಕೊಂಡಿವೆ. ಈ ದೃಷ್ಟಿಯಿಂದ ಶರಣ ಧರ್ಮಕ್ಕೂ ವೈದಿಕ ಸಂಸ್ಕೃತಿಯ ಹಿನ್ನೆಲೆ
ಇದೆ–ಎನ್ನುವುದನ್ನು ಅಲ್ಲಗಳೆಯಲಾಗುವುದಿಲ್ಲ. (ಕರ್ನಾಟಕದ ಮಹಾನ್ ಸಂಶೋಧಕ
ರಾದ ಶ್ರೀಮಾನ್ ಶಂ. ಬಾ. ಜೋಷಿಯವರು 'ಋಗ್ವೇದ'ದಲ್ಲಿ ವೀರಶೈವ ಧರ್ಮದ
ಮೂಲವನ್ನು ಕಂಡಿದ್ದಾರೆ. (ನೋಡಿ ಶಿವರಹಸ್ಯ) ಹಾಗೆ ನೋಡಿದರೆ ಯಾವ ಸಂಪ್ರ
ದಾಯದವರೂ ಸ್ಮಾರ್ತ, ಮಾಧ್ವ–ವೈಷ್ಣವರೂ ಸಹ ವೇದದಲ್ಲಿ ಹೇಳಿದ ಸಂಪೂರ್ಣ
ವಿಷಯಗಳನ್ನು ಅನುಸರಿಸುವದು ಕಂಡು ಬರುವದಿಲ್ಲ. ಎಲ್ಲ ಆಸ್ತಿಕ ಧರ್ಮಗಳಲ್ಲೂ
ವೈದಿಕ ಆಚರಣೆ ಭಾಗಶಃ ಇದೆಯಲ್ಲದೆ ಪೂರ್ಣ ರೂಪದಲ್ಲಿಲ್ಲವೆಂಬುದು ಗಮನಾರ್ಹ
ಸಂಗತಿ. ಹೀಗಿರುವಾಗ ಆಸ್ತಿಕ ಮತಗಳಲ್ಲಿ ವೈದಿಕ–ಅವೈದಿಕ ಮತಗಳೆಂದು ವಿಂಗ
ಡಿಸುವದು ಔಚಿತ್ಯ ಪೂರ್ಣವಾಗಿ ಕಾಣಿಸುವದಿಲ್ಲ.

'ವೇದ ನಮ್ಮದು' ಅದಕ್ಕೆ ನಾವೇ 'ಗುತ್ತಿಗೆದಾರರು' ಎಂದು ಹೇಳುವದೂ
ಮೌಢ್ಯತನ ವಾಗುತ್ತದೆ. ವೇದ ಮಾನವ ಜನಾಂಗದ ಜ್ಞಾನದ ಬೆಳಕು.

ಇನ್ನು ಶರಣರ ವಿಚಾರದಲ್ಲಿ ವೈದಿಕ ಸಂಸ್ಕೃತಿಯನ್ನು ಪರಿಶೀಲಿಸುವಾ—ಶರ
ಣರು ತಮ್ಮ ವಚನಗಳಲ್ಲಿ ೩೭ ಕಡೆ ವೇದವನ್ನು ಗೌರವ ಭಾವದಿಂದ ಕಂಡು ಅದರ
ವಾಕ್ಯಗಳನ್ನು ಉದಾಹರಿಸಿದ್ದಾರೆಂದು ನಾಡಿನ ಹಿರಿಯ ವಿದ್ವಾಂಸರಾದ ವ್ಯಾಕರಣ
ತೀರ್ಥ ಪಂ|| ಚಂದ್ರಶೇಖರ ಶಾಸ್ತ್ರಿಗಳು ಅಭಿಪ್ರಾಯ ಪಡುತ್ತಾರೆ.

'ನಾದಪ್ರಿಯ ಶಿವನೆಂಬರು ನಾದಪ್ರಿಯ ಶಿವನಲ್ಲ—ವೇದಪ್ರಿಯನೂ ಅಲ್ಲ.
ಭಕ್ತಿ' ಪ್ರಿಯನೆಂದು ಹೇಳುವ ಮಾತು 'ಭಕ್ತಿಯ ಪ್ರಾಶಸ್ತ್ಯ', ವೇದದ ಉಪಾಸನಾ
ಕಾಂಡದ ಬಗ್ಗೆ ಅಪಾರ ಗೌರವ ಭಾವವನ್ನು ವ್ಯಕ್ತಪಡಿಸುತ್ತದೆ.

'ವೇದ ಘನವೆಂಬೆನೆ? ಪ್ರಾಣಿವಧೆಯ ಹೇಳುತ್ತಿದೆ' ಎನ್ನುವಲ್ಲಿ ವೇದದ ಕರ್ಮ



ಕಾಂಡದ ಬಗೆಗೆ ಮಾತ್ರ ತಿರಸ್ಕಾರ ಕಂಡು ಬರುತ್ತದೆ. "ಸೋಮಃ ಪವತೆ ಎಂಬ
ಶೃತಿಯ ನರಿದು—ಶಿವನೇಕೋ ದೇವ ರುದ್ರ : ನ ದ್ವಿತೀಯನೆಂಬುವದು" ಇಲ್ಲಿ
ವೇದದ ಪ್ರಮಾಣದಂತೆ ದೇವರು ಒಬ್ಬನೇ ಎಂದು ಸಾರುತ್ತಾರೆ.

"ಶೃತಿ ತತಿ ಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲನ ನಾನೇನೆಂಬೆನಯ್ಯ ಮಹಾ
ದಾನಿ ಕೂಡಲ ಸಂಗಮ ದೇವಾ" ಈ ವಚನದಲ್ಲಿ ಪರಮಾತ್ಮನ ವಿಶ್ವರೂಪವನ್ನು
ಅಂಗೀಕರಿಸಿದ್ದಾರೆ.

"ವೇದವೆಂಬುದು ನಿಮಗೆ ತಿಳಿಯದು; ಹೋಮದ ನೆವದಿಂದ ಹೋತವನ್ನು
ತಿನ್ನುವಿರಿ" ಎನ್ನುವ ವಚನದಲ್ಲಿ ವೇದಕ್ಕೆ ಅಪಾರ್ಥವನ್ನು ಮಾಡಿ ತಮ್ಮ ಸ್ವಾರ್ಥ
ಕ್ಕಾಗಿ 'ಪೂಜೆ'ಯ ನೆವದಲ್ಲಿ 'ಹಿಂಸೆ'ಯನ್ನು ಆಚರಿಸುತ್ತಿದ್ದ ವೈದಿಕರನ್ನು ಎಚ್ಚರಿಸಿ
ದ್ದಾರೆ!! "ಯತೋವಾಚ ನಿವರ್ತಂತೆ ಅಪ್ರಾಪ್ಯ ಮನಸಾ ಸಹ ಅಗಮ್ಯ ಕೂಡಲ
ಸಂಗಮದೇವಾ" ಹೀಗೆ ವೇದದ ಪ್ರಮಾಣಗಳನ್ನು ವಚನಕಾರರು ಗೌರವದಿಂದ ಉದ್ಧ
ರಿಸಿದ್ದಾರೆ. ವೇದದ ಬಗ್ಗೆ ವಚನ ಕಾರರಿಗೆ ತಿರಸ್ಕಾರವಿದ್ದಿದ್ದರೆ 'ವೇದ'ದ ವಾಕ್ಯ
ಗಳನ್ನು ತಮ್ಮ ವಚನಗಳಲ್ಲಿ ಉದ್ಧರಿಸುತ್ತಿರಲಿಲ್ಲ.

ವಚನಕಾರರು ವೇದಗಳನ್ನು ಖಂಡಿಸಿರುವದು 'ಜಾತಿ'ಯ ಹಾಗೂ 'ಜೀವ
ಹಿಂಸೆ'ಯ ಆಚರಣೆಯ ಸಂಬಂಧದಲ್ಲಿ. ಮೂಲ ವೇದದಲ್ಲಿ 'ಜಾತಿವಾದ'—'ಪಶುವಧೆ'
ಇರಲಿಲ್ಲವೆಂದು ಶರಣರ ಅಭಿಪ್ರಾಯವಾಗಿತ್ತು. ವರ್ಣಗಳಿದ್ದವು, ಅವು ಗುಣಪ್ರಧಾನ
ವಾಗಿದ್ದವಲ್ಲದೆ, ಆನುವಂಶಿಕ ಹಾಗೂ ಜಾತಿ ಪದ್ಧತಿಗಳ ಮೇಲೆ ಪ್ರಧಾನವಾಗಿರಲಿಲ್ಲ.
ವಚನಕಾರರು —ಏಕ ದೇವೋಪಾಸನೆ, ದೇವನ ವಿಶ್ವರೂಪ, ದೀಕ್ಷಾ ಸಂಸ್ಕಾರ ಷಡ
ಕ್ಷರಿ ಮಂತ್ರ ಹಾಗೂ 'ಓಂ'ಕಾರ ಪ್ರಣವ ಮಂತ್ರ ಇತ್ಯಾದಿಗಳ ವಿಚಾರವಾಗಿ ಸಾಕಷ್ಟು
ವೇದ ಪ್ರಮಾಣಗಳನ್ನು ತಮ್ಮ ವಚನದಲ್ಲಿ ಉದಹರಿಸಿ, ವೇದ ಪರಂಪರೆಯನ್ನು ಗೌರ
ವಿಸಿದ್ದಾರೆ. ಬುದ್ಧ–ಮಹಾವೀರ–ಬಸವಣ್ಣನವರಂಥ ಧರ್ಮ ಸುಧಾರಕರು ಬಂದು
ಹೋದ ಮೇಲೆ ವೈದಿಕರಿಗೆ ತಮ್ಮ 'ಅಜ್ಞಾನದ ತಪ್ಪು' ಒಪ್ಪಿಗೆಯಾಯಿತು. ನಂತರ
ವೇದಕ್ಕೆ ಬೇರೆ ಅರ್ಥದಲ್ಲಿ ಭಾಷ್ಯಗಳು ಬರೆಯಲ್ಪಟ್ಟವು. ಧರ್ಮ ಸುಧಾರಕರಾದ
ದಯಾನಂದ ಸರಸ್ವತಿಗಳು ಕಳೆದ ಶತಮಾನದಲ್ಲಿ ವೇದದಲ್ಲಿ 'ಹಿಂಸೆಗೆ' ಆಸ್ಪದವಿಲ್ಲ
ವೆಂದೂ, ವೇದದ 'ವರ್ಗ ಪದ್ಧತಿ' ಗುಣ ಪ್ರಧಾನವೆಂದೂ, ವೇದಕ್ಕೆ ಎಲ್ಲರೂ ಅಧಿ
ಕಾರಿಗಳು, ಎಲ್ಲರೂ ವೈದಿಕರೆಂದು ಹೇಳಿ ವಿಶಾಲ ಮನೋಭಾವದಿಂದ ವೇದದ ಮಂತ್ರ
ಗಳಿಗೆ, ಅಹಿಂಸಾ ಪರವಾದ, 'ಜಾತ್ಯತೀತ'ವಾದ ಅರ್ಥವನ್ನು ಬರೆದ ಸಂಗತಿ—ಎಲ್ಲ
ವಿದ್ವಾಂಸರಿಗೂ ಗೊತ್ತಿರುವ ವಿಚಾರವಾಗಿದೆ. ಇದರಿಂದಾಗಿ ಯಜ್ಞಯಾಗಾದಿಗಳಲ್ಲಿ
'ಪಶುವಧೆ'ಯಂತಹ ಅನಿಷ್ಟ ಪದ್ಧತಿ ನಿವಾರಣೆಯಾಯಿತು. ಈ ಕಾರ್ಯದ ಕೀರ್ತಿ
ಬಹುಪಾಲು ದಯಾನಂದ ಸರಸ್ವತಿಗಳಿಗೆ ಸಲ್ಲಬೇಕಾಗಿದೆ. ವೈದಿಕರಿಂದ ಸೃಷ್ಟಿಗೊಂಡ
ಆರ್ಯ–ಅನಾರ್ಯ ಭಾವನೆಗಳನ್ನು ಕಿತ್ತೊಗೆದು ದಯಾನಂದರು ವಿಶ್ವವನ್ನೇ ಆರ್ಯ

ರೆಂದು ಸಂಬೋಧಿಸಿದರು!! ಇದನ್ನು ನೋಡಿದಾಗ ವಿದೇಶೀ ಧರ್ಮಗಳ ಸಂಸ್ಕೃತಿ-ಧರ್ಮಗಳ ಪ್ರಭಾವ ಬಿದ್ದು ಸುಧಾರಣೆಗೆ ತೊಡಗಿದ ಶ್ರೀ ದಯಾನಂದ ಸರಸ್ವತಿಯವರಿಗೂ ಬಹಳಷ್ಟು ಮುಂಚೆಯೇ ಬಸವಣ್ಣನವರು ಅದೇ ಕ್ರಾಂತಿ ಮತ್ತು ಸುಧಾರಣೆಯ ದಾರಿ ತುಳಿದಿರುವದು ಅಭಿಮಾನ ಆಶ್ಚರ್ಯದ ಸಂಗತಿಗಳಲ್ಲವೆ? ಶರಣರ ಕ್ರಾಂತಿಯನ್ನು ಸರಿಯಾಗಿ ಅರ್ಥಮಾಡಿಕೊಂಡು ನಾಡಿನಾದ್ಯಂತ ಆಚರಣೆಗೆ ತಂದಿದ್ದರೆ ಶ್ರೀ ದಯಾನಂದ ಸರಸ್ವತಿಯವರು ವೈದಿಕರನ್ನೂ. ಮೂಢ ನಂಬಿಕೆಗಳನ್ನು ಖಂಡಿಸುವ, ಹಾಗೂ ವಿಡಂಬಿಸುವ ಪ್ರಮೇಯವೇ ಇರುತ್ತಿರಲಿಲ್ಲ. ಲಿಂಗಾಯತ ಧರ್ಮವು ಹಿಂದೂ ಸಂಸ್ಕೃತಿಯ ಒಂದು ಪ್ರಧಾನ ಅಂಗವಾಗಿದೆ. ಅದರ ಉಗಮ ಕರ್ನಾಟಕದಲ್ಲಾದರೂ ಅದರ ತತ್ವಗಳು ಕೇವಲ ಅದರ ಅನುಯಾಯಿಗಳ ಸಂಖ್ಯಾ ಬಲದಿಂದ ನಿಂತಿಲ್ಲ, ಉದಾರ ಹಾಗೂ ಉದಾತ್ತ ತತ್ವಗಳನ್ನು ಗರ್ಭೀಕರಿಸಿಕೊಂಡು ಅದು ವಿಶ್ವಮಾನ್ಯವಾಗಿದೆ. ಶರಣರು ಹಿಂದೂ ಧರ್ಮದ ೨೪ ಸಂಸ್ಕಾರಗಳಲ್ಲಿ ದಶವಿಧ ಸಂಸ್ಕಾರಗಳನ್ನು ಒಪ್ಪಿಕೊಂಡಿದ್ದಾರೆ. ಲಿಂಗಧಾರಣೆ, ದೀಕ್ಷಾ ಸಂಸ್ಕಾರ, ವಿವಾಹ ಹಾಗೂ ಉತ್ತರ ಪ್ರಯೋಗ, ಇವು ಪ್ರಮುಖ ಸಂಸ್ಕಾರಗಳಾಗಿವೆ. ಅಲ್ಲದೆ ಇಷ್ಟಲಿಂಗ ಪೂಜೆ, ಉಪಾಸನೆಯಲ್ಲೂ ಕೆಲವೊಮ್ಮೆ ವೇದ ಮಂತ್ರಗಳನ್ನು' ಧ್ಯಾನಕ್ಕಾಗಿ ವೇದೋಕ್ತ ಬೀಜ ಮಂತ್ರವನ್ನು ಬಳಸಿಕೊಳ್ಳುತ್ತಾರೆ.

ವಚನಕಾರರು ತಮ್ಮ ವಚನಗಳಲ್ಲಿ 'ಹಿಂಸೆ' 'ವರ್ಣವಾದ' ಬಹು ದೇವತಾ ಉಪಾಸನೆ, 'ಕರ್ಮಠತನ', ಇವೇ ಮೊದಲಾದ ಅಲೌಕಿಕ ವಿಷಯಗಳನ್ನು ಖಂಡಿಸಿರುವುದು ನಿಜ. ಅಷ್ಟೇ ಅಲ್ಲ: ಇದನ್ನು ಬೋಧಿಸುವ ವೇದ-ಅದು ವೇದ ಅಲ್ಲವೆಂದೂ. ಇವುಗಳನ್ನು ಆಚರಿಸುವವರನ್ನು ಕಠೋರವಾಗಿ 'ಅನಾಮಿಕ'ರೆಂದೇ ಕರೆದಿದ್ದಾರೆ.

ಅಂದರೆ ಶರಣರು ತಮ್ಮ ವಚನಗಳಲ್ಲಿ ವೇದಗಳ ಮಾನವೀಯ ಮತ್ತು ತಾತ್ತ್ವಿಕ ವಿಷಯಗಳನ್ನು ಕೊಂಡಾಡಿದ್ದಾರೆ. ಕಾಲಾನಂತರದಲ್ಲಿ ವೇದಕ್ಕೆ ಅಪಾರ್ಥ ಭಾಷ್ಯಗಳು ಮೂಡಿ, ವೈದಿಕ ಧರ್ಮಾಚರಣೆಗಳು ಅವನತಿಯ ಹಾದಿಯನ್ನು ಹಿಡಿದಾಗ ವೇದದ ಹೆಸರಿನಲ್ಲಿ ಉದಾತ್ತ ದರ್ಶನ. ಮರೆಯಾಗಿ—'ಪಶು ವಧೆ'—'ಮೇಲು ಕೀಳು ಎಂಬ ಕುಬ್ಜ ಕಲ್ಪನೆಗಳು ಸಮಾಜದಲ್ಲಿ ನೆಲೆಗೊಂಡಾಗ ಶರಣರು ಅದನ್ನು ಕಟುವಾಗಿ ಖಂಡಿಸಲೇಬೇಕಾಯಿತು. ವಚನಕಾರರು (ಶರಣರು) ಈ ಅರ್ಥದಲ್ಲಿ ಯೋಚಿಸಿದಾಗ ಅವರು ನಿಜಕ್ಕೂ ವೈದಿಕ ಧರ್ಮದ ವಿರೋಧಿಗಳಲ್ಲ; ಸುಧಾರಕರು. ಆದರೆ 'ಹಿಂಸೆ' 'ವರ್ಗ ಭೇದ' ಮುಂತಾದ ಅವೈದಿಕ ಸಂಸ್ಕೃತಿಯ ಕಡುವೈರಿಗಳು. ಯಾವುದೇ ಸಂಸ್ಕೃತಿಯಲ್ಲಿರುವ 'ಸತ್ಯ'ವನ್ನು 'ಸತ್ವ'ವನ್ನು ಮಾತ್ರ ಎತ್ತಿ ಹಿಡಿಯುವುದು, ಗುಣಗ್ರಾಹಿಗಳು ಮತ್ತು ಹಿಂದೂ ಸಮಾಜದ ಸುಧಾರಕರಾದ ವಚನಕಾರರ ಚರಮ ಲಕ್ಷ್ಯವಾಗಿದ್ದಿತು.






ಹಿಂದಿನ ಸಂಚಿಕೆಯವರೆಗೆ

(ಧರ್ಮಪ್ರಸಾರ-ವಿದೇಶ ಸಂದರ್ಶನದ ಮಣಿಹ ಹೊತ್ತ ಪೂಜ್ಯ ಮಾತೆಯವರು ೧೯೭೬ ಮೇ ೧೪ರಂದು ತಾಯ್ನಾಡಿನಿಂದ ತೆರಳಿದ್ದರು. ಏಕಾಂಗಿನಿಯಾಗಿ ಅಪರಿಚಿತ ನಾಡಿಗೆ ಹೋದ ಅವರಿಗೆ ಪ್ರಾರಂಭದಲ್ಲಿ ಸ್ವಲ್ಪ ತೊಂದರೆಯಾದರೂ ಸ್ವಧೈರ್ಯದಿಂದ ಪರಿಹರಿಸಿಕೊಂಡು ಮುಂದೆ ಸಾಗಿದರು, ತಮ್ಮ ಅನುಭವಗಳನ್ನು ತತ್ತ್ವಜ್ಞಾನದೊಡನೆ ಮೇಳೈಸಿ ವಿವರಿಸುತ್ತಿದ್ದಾರೆ.)

**ಧಾರಾವಾಹಿ-೮** **ಜಗದ್ಗುರು ಮಾತಾಜಿ.**

ಜೀವನವೊಂದು ನಿರಂತರವಾಗಿ ಹರಿವ ಪ್ರವಾಹ. ಸುತ್ತಲಿನ ಹಳ್ಳಕೊಳ್ಳಗಳನ್ನು ತನ್ನ ಒಡಲಲ್ಲಿ ವೇಧಿಸಿಕೊಳ್ಳುತ್ತ, ಬಯಸಿದವರಿಗೆ ಮತ್ತೆ ನಾಲೆಕಾಲುವೆಗಳ ಮೂಲಕ ನೀರನ್ನೆರೆಯುವ ನದಿಯಂತೆ, ವ್ಯಕ್ತಿಯ ಜೀವನವೂ ಸಹ ಸಾಗಬೇಕು. ಜಗತ್ತಿನ ಪಾಠಶಾಲೆಯಿಂದ ನೂತನ ಜ್ಞಾನ ಪ್ರವಾಹವನ್ನು ಇಂಬಿಟ್ಟು ಕೊಳ್ಳಬೇಕು, ಮತ್ತೆ ಅದನ್ನು ಸಾಹಿತ್ಯ, ವಾಣಿಯ ಮೂಲಕ ಧಾರೆಯೆರೆಯುತ್ತಿರಬೇಕು. ಜ್ಞಾನದ ನೂತನ ವಾಹಿನಿಯನ್ನು ಆಹ್ವಾನಿಸದಿದ್ದರೆ ಬದುಕು ನಿಂತ ನೀರಿನಂತೆ ಮಲೆಯುತ್ತದೆ. ನಾನು ಒಂದೆಡೆಯಲ್ಲಿ ವಸ್ತುಸಂಗ್ರಹಾಲಯಗಳ ದರ್ಶನದಿಂದ, ವ್ಯಕ್ತಿಗಳ ಸಂದರ್ಶನದಿಂದ ಜ್ಞಾನವನ್ನು ಸಂಗ್ರಹಿಸುತ್ತಿದ್ದಂತೆಯೇ ಪ್ರವಚನಗಳ ಮೂಲಕ ಧಾರೆ ಎರೆಯುತ್ತಿದ್ದೆ.

ಇಪ್ಪತ್ತೈದನೆ ಜೂನ್, ೧೯೭೬ ರಂದು ಸೌತ್ ಕೆನ್ಸಿಂಗ್‌ಟನ್‌ನಲ್ಲಿರುವ ಬೋಧಕರ ತರಬೇತಿ ಕೇಂದ್ರದಲ್ಲಿ ಬಸವಧರ್ಮದ ಜೀವಾಳವಾದ ಇಷ್ಟಲಿಂಗದ ವೈಜ್ಞಾನಿಕತೆ, ಅದರ ತಾತ್ತ್ವಿಕ ವಿವೇಚನೆ, ಶಿವಯೋಗದಲ್ಲಿ ಅದರ ಪಾತ್ರ, ಪೂಜೆಯಲ್ಲಿ ಬರುವ ವಿಶೇಷತೆಗಳನ್ನು ವಿವರಿಸುವುದು ನನ್ನ ಕಾರ್ಯಕ್ರಮ. ಆ ಜನ ನಿಜಕ್ಕೂ ಮೆಚ್ಚಿಕೊಂಡರು. ಇಷ್ಟಲಿಂಗವು, ನಿರಾಕಾರ ದೇವನ ಸಾಕಾರ ದೇಹವಾದ ಬ್ರಹ್ಮಾಂಡದ ಗೋಲಾಕಾರದ ರೂಪದಲ್ಲಿದೆ. ಮತ್ತು ಇದು ಕೇವಲ ಭಕ್ತಿ-ಅರ್ಚನೆಗೆ ಮಾತ್ರ ಉಪಯುಕ್ತವಲ್ಲ, ತ್ರಾಟಕ ಯೋಗಕ್ಕೆ ಸಹಾಯಕಾರಿ ಎಂದಾಗ ಅವರು ಆಶ್ಚರ್ಯಪಟ್ಟರು.

ನಾವು ಒಂದು ಕನ್‌ವರ್ಜಿಂಗ್ ಲೆನ್ಸನ್ನು ಕಾಗದ ಚೂರಿನ ಮೇಲೆ ಸೂರ್ಯನ ಬೆಳಕಿನಲ್ಲಿ ಹಿಡಿದಾಗ, ಕಿರಣಗಳು ಕೇಂದ್ರೀಕೃತಗೊಂಡು ಅಧಿಕ ಶಾಖವನ್ನು ಸಂಗ್ರಹಿಸಿ ಕಾಗದವನ್ನು ಸುಡುವಂತೆ, ಇಷ್ಟಲಿಂಗದ ಮೇಲೆ ದೃಷ್ಟಿನಿಲ್ಲಿಸಿ ಯೋಗಧ್ಯಾನದಲ್ಲಿ ತೊಡಗಿದಾಗ ವಿಶೇಷ ಶಕ್ತಿಯೊಂದು ಜಾಗ್ರತವಾಗಿ ನಮ್ಮಲ್ಲಿ ಪ್ರಾಣವಿದ್ಯುತ್ತಿನ ಪ್ರಭೆಯನ್ನು ಅಧಿಕಗೊಳಿಸದಿರದು ಎಂದು ಸಮರ್ಪಕ ವ್ಯಾಖ್ಯೆ ನೀಡಿದಾಗ ಅಲ್ಲಿ ನೆರೆದ ಪಾದ್ರಿಗಳು ತಲೆದೂಗಿದರು, ಆನಂದ ಆಶ್ಚರ್ಯಗಳಿಂದ. ದೇಹದಲ್ಲಿ ಒಂದು ಪ್ರಾಣ ವಿದ್ಯುತ್ (Vital Electricity) ಪ್ರಭೆಯುಂಟು. ಸುಪ್ತಾವಸ್ಥೆಯಲ್ಲಿ ಇದಿರು ವುದು. ವಿದ್ಯುತ್ತನ್ನು ಉತ್ಪಾದಿಸುವಾಗ ಸಂಗ್ರಹಿತ ವಿದ್ಯುತ್ತನ್ನು ಬಳಸಿಕೊಂಡು ನೇರವಿದ್ಯುತ್ತನ್ನು ತಯಾರಿಸುವಂತೆ, ಪ್ರಾಣವಿದ್ಯುತ್ತನ್ನು ಜಾಗೃತಿಸಲು ಇಷ್ಟಲಿಂಗದ ಶಕ್ತಿಯನ್ನು ಬಳಸಿಕೊಳ್ಳಲಾಗುವದು ಎಂಬುದನ್ನು ವಿವರಿಸಿದೆ. "ಅತ್ಯಂತ ತಾತ್ತ್ವಿಕ, ಯೌಗಿಕ, ಅಧ್ಯಾತ್ಮಿಕ ಮತ್ತು ಸಾಮಾಜಿಕ ಸಮಾನತೆಯ ಅರ್ಥವುಳ್ಳ ಇಷ್ಟಲಿಂಗ ಜಾತಿಯ ಕುರುಹಲ್ಲ; ಆತ್ಮಸಾಕ್ಷಾತ್ಕಾರ ಸ್ವರೂಪ ದರ್ಶನ ಮಾಡಿಕೊಳ್ಳ ಬಯಸುವ ಎಲ್ಲರ ಭಾಗ್ಯ" ಎಂಬುದನ್ನು ಹೇಳಿದಾಗ ಈ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನ ಮಾಡುವ ಸಂಕಲ್ಪವನ್ನು ಶ್ರೋತೃಗಳು ವ್ಯಕ್ತಪಡಿಸಿದರು. ಒಂದು ಗಂಟೆಯ ಭಾಷಣದ ನಂತರ ಒಂದೂವರೆ ತಾಸಿನ ಚರ್ಚೆ; ಯಾವುದೇ ವಿಷಯವನ್ನು ಸ್ಪಷ್ಟೀಕರಣ ಮಾಡಿ ಕೊಳ್ಳದೆ ಸುಮ್ಮನೆ ಬಿಡುವ ಮನೋಭಾವ ಅವರದಲ್ಲ.

ಒಮ್ಮೆ, ಅದೇ ವೇಳೆಗೆ ಆಗಮಿಸಿದ ಸ್ತ್ರೀ ಸನ್ಯಾಸಿನಿಯೋರ್ವರ ಕಾರ್ಯಕ್ರಮ ಇಂದ್ರನಾಥರ ಯೋಗಕೇಂದ್ರದಲ್ಲಿಡಲಾಯಿತು. ಅವರು ಭಕ್ತಿಯ ಆಧಿಕ್ಯ ಒತ್ತಿಹೇಳಿ ಭಾಷಣ ಮಾಡಿದರು. ನಂತರ ವೈವಿಧ್ಯಮಯ ಪ್ರಶ್ನೆಗಳನ್ನು ಶ್ರೋತೃಗಳು ಕೇಳಿದಾಗ "ಕೆಲವು ಅನುಭವಕ್ಕೆ ಮಾತ್ರ ಸಿಲುಕುವವು; ಅವುಗಳನ್ನು ಚರ್ಚೆಮಾಡಿ ತಿಳಿಯುವುದು ಅಸಂಭವ" ಎಂದು ಹಾರಿಕೆಯ ಉತ್ತರ ಕೊಟ್ಟರು. "ಎಲ್ಲಿ ಹೋದರೂ ಭಾರತೀಯರ ಸಂತರ ಈ ರಾಗಕ್ಕೆ ಕೊನೆಯೇ ಇಲ್ಲವೆ!" ಎನ್ನಿಸಿತು ನನಗೆ. ಅವರನ್ನು ಬೇಸರಿಸಲು ಬಯಸದೆ ಶ್ರೋತೃಗಳು ಮೌನವಾಂತರು. ಆ ನಂತರ ನನ್ನ ಭಾಷಣ. ದೀರ್ಘಕಾಲದ ಪ್ರಶ್ನೋತ್ತರಗಳಿಂದ ಪುಳಕಿತರಾದರು ಶ್ರೋತೃಗಳು. ಏನೇನೋ ಪ್ರಶ್ನೆಕೇಳಬೇಕೆಂಬ ಅತ್ಯುತ್ಸಾಹ. "ನಾನಿನ್ನೂ ಇರುವೆ. ಬಂದು ನಿಮ್ಮ ಸಂದೇಹಗಳನ್ನು ಪರಿಹರಿಸುವೆ.' ಎಂದು ಭರವಸೆ ನೀಡಿದೆ. ಸಮಾಧಾನ ಹೊಂದಿದರು. ಅದರ ಮುಂದಿನವಾರ ಇಂದ್ರ ನಾಥರ ಯೋಗಕೇಂದ್ರದಲ್ಲಿ "ಆತ್ಮದ ಕಲ್ಪನೆ" ಬಗ್ಗೆ ಮಾತನಾಡಿದೆ. ವಿಷಯಗಳ ಬಗ್ಗೆ ಚಿಂತನೆ ಮಾಡುವ, ಚರ್ಚಿಸುವ ಅಪೂರ್ವ ಅಭೀಪ್ಸೆ ಆ ಜನಗಳದು.

## ವಾಕ್ ಸ್ವಾತಂತ್ರ್ಯ

ಪ್ರಜಾಪ್ರಭುತ್ವದ ಜೀವಾಳವಾದ ವಾಕ್ ಸ್ವಾತಂತ್ರ್ಯದ ಪರಮಾವಧಿಯನ್ನು ಇಲ್ಲಿ



ಕಾಣಬಹುದು. 'ಕಬ್ಬಿಣದ ತೆರೆ'ಯೆಂದು ಪ್ರಸಿದ್ಧವಾಗಿರುವ ಕಮ್ಯುನಿಸ್ಟ್ ದೇಶಗಳಿಗೆ ತದ್ವಿರುದ್ಧವಾದ ಪ್ರವೃತ್ತಿ ಈ ನಾಡಿನಲ್ಲಿ. ರಾಷ್ಟ್ರೀಯ ಸಮಸ್ಯೆಗಳ ಚಿಂತನೆಯಲ್ಲಿ ನಾಗರಿಕರು ಭಾಗವಹಿಸುವುದನ್ನು ನೋಡಿದರೆ ಎಷ್ಟು ಜಾಗ್ರತರಾಗಿರುವರು ಎಂದೆನಿಸ ದಿರದು. ಸರ್ಕಾರದ ಧೋರಣೆಗಳನ್ನು, ಆಚರಣೆಗಳನ್ನು ಬಹಿರಂಗವಾಗಿಯೇ ಚರ್ಚಿಸು ವರು. ಇದಕ್ಕೆ ಅನುಕೂಲಕರವಾದ ಸಾಧನಗಳೆಂದರೆ ರೇಡಿಯೋ-ಟೆಲಿವಿಷನ್‌ಗಳು, ಪ್ರತಿಯೊಂದು ಘಟನೆಗಳ ಬಗ್ಗೆಯೂ ವಿಚಾರವೇದಿಕೆ ಏರ್ಪಡಿಸುತ್ತಾರೆ. ಪರ ಮತ್ತು ವಿರೋಧಿ ಪ್ರತಿನಿಧಿಗಳನ್ನು ಆಮಂತ್ರಿಸಿ, ವ್ಯವಸ್ಥಾಪಕರು ವಿಚಾರವನ್ನು ಮಂಡಿಸು ತ್ತಾರೆ. ಅವರಲ್ಲಿ ಚರ್ಚೆಯಾದ ಬಳಿಕ, ನಾಗರಿಕರಿಗೆ ಅವಕಾಶ. ರೇಡಿಯೋವನ್ನು ಕೇಳುತ್ತ ಚರ್ಚೆಯನ್ನು ಮೆಲುಕಾಡಿಸುವ ನಾಗರಿಕನು ಫೋನಿನ ಮೂಲಕ ರೇಡಿಯೋ ಸ್ಟೇಷನ್ನಿಗೆ ಫೋನ್‌ಮಾಡಿ ತನ್ನ ಭಾವನೆಗಳನ್ನು, ಸಂಶಯಗಳನ್ನು ಮಂಡಿಸಬಹುದು. ಬೆಳಗಿನಿಂದ ರಾತ್ರಿಯವರೆಗೆ ಇಂಥ ಚರ್ಚೆ ನಡೆದಿದ್ದು, ಇಡೀ ಸಮಾಜ ರಾಷ್ಟ್ರಗಳ ಸಮಸ್ಯೆಯನ್ನು ಅರಿಯಲವಕಾಶವಿದೆ. ಟೆಲಿಫೋನ್ ವಿಭಾಗದವರು, ಜಲಮಂಡಳಿ ಯವರು, ಇನ್ಸೂರೆನ್ಸ್ ಕಂಪೆನಿಯವರು, ಸಾಹಿತಿ–ಕಲಾಕಾರರು ಹೀಗೆ ಪ್ರತಿಯೋರ್ವ ರೊಡನೆ ಚರ್ಚೆ ನಡೆದಾಗ ಜನರು ತಮ್ಮ ತೊಂದರೆಗಳನ್ನು ಹೇಳಿಕೊಳ್ಳುವರು. ದುರಾಡಳಿತಕ್ಕಾಗಿ ಖಂಡಿಸುವರು, ಆಡಳಿತ ಪಕ್ಷದ ಎಂ.ಪಿ.ಗಳು ಮತ್ತು ವಿರೋಧ ಪಕ್ಷದವರು ಮಾಡುವ ಸಂದರ್ಶನ, ಜನಗಳಿಗೆ ಸಮಸ್ಯೆಗಳನ್ನು ಬಿಡಿಸಿ ಮನದಟ್ಟು ಮಾಡುವ ರೀತಿ ಬಹಳ ಪ್ರೌಢವಾಟ್ಟದವು.

ಸರ್ಕಾರಿ ಅಧಿಕಾರಿಗಳು ಸಾರ್ವಭೌಮರಂತೆ ವರ್ತಿಸುವುದಿಲ್ಲ. ಒಮ್ಮೆ ಅಧಿಕಾರಕ್ಕೆ ಬಂದಬಳಿಕ ತಮ್ಮನ್ನು ನಿವೃತ್ತರಾಗುವ ತನಕ ಯಾರೂ ತೆಗೆಯಲಾರರು ಎಂಬ ಮನೋ ಭಾವಕ್ಕೆ ಅಲ್ಲಿ ಅವಕಾಶವಿಲ್ಲ. ತಪ್ಪುಗಳನ್ನು ಕಂಡಜನ ದೂರು ಸಲ್ಲಿಸಿದರೆ ಪ್ರಾಮಾಣಿಕ ವಿಚಾರಣೆಯಾಗುವುದು. ಒಮ್ಮೆ ಮೂವರು ತರುಣ ವೈದ್ಯರು ಆಸ್ಪತ್ರೆಯ ಆವರಣ ದೊಳಕ್ಕೆ ಕಾರನ್ನು ತಂದರು. ಕಾರುಗಳು ನಿಲ್ಲಲು ಅನುಮತಿಯಿಲ್ಲದ ಜಾಗವದು. ದುರ್ದೈವಕ್ಕೆ ಯಂತ್ರದೋಷದಿಂದ ಆಸ್ಪತ್ರೆಯ ಭವನಕ್ಕೇ ಅದು ಡಿಕ್ಕಿಹೊಡೆಯಿತು. ಯಾರಿಗೂ ಜೀವಹಾನಿಯಾಗಲಿಲ್ಲ; ಆದರೆ ರೋಗಿಗಳು ವಾಸಿಸುವ ಕೊಠಡಿಗಳ ಸನಿಹಕ್ಕೆ ಕಾರುತಂದರೆ ಅವರ ಮಾನಸಿಕ ಸ್ವಾಸ್ಥ್ಯಕ್ಕೆ ಭಂಗ ಬರುವುದಿಲ್ಲವೇ ? ಎಂದು ತೀಕ್ಷ್ಣ ವಿಚಾರಣೆ ನಡೆಯಿತು. ವೈದ್ಯರುಗಳಿಗೆ ಶಿಕ್ಷೆಯಾಯಿತು. ನಮ್ಮ ಆಸ್ಪತ್ರೆಗಳಲ್ಲಿ ಕೆಲವು ತರುಣ ವೈದ್ಯರು, ವೈದ್ಯ ವಿದ್ಯಾರ್ಥಿನಿಯರು, ನರ್ಸ್‌ಗಳು ಹರಟೆಹೊಡೆಯುವ ರಭಸನೋಡಿದರೆ ಆಸ್ಪತ್ರೆಗಳ ನಿರಂಕುಶ ಸಾರ್ವಭೌಮರು ಅವರೇ ಎನ್ನಿಸದೆ ಇರದು. ಅನೇಕರಲ್ಲಿ ಒಂದುಬಗೆಯ ಅಹಂಕಾರ, ನಿರ್ಲಕ್ಷ, ಬೇಜವಾಬ್ದಾರಿ ಮನೆಮಾಡಿ ಕೊಂಡಿರುವುದನ್ನು ಕಾಣುತ್ತೇವೆ.

ಒಮ್ಮೆ ಭೂಗತ ರೇಲ್ವೆಯಲ್ಲಿ ಪ್ರಯಾಣಿಸುವಾಗ ಆದ ಒಂದು ಅನುಭವ.

ಲಂಡನ್ನಿನ ಭೂಗತ ರೇಲ್ವೆ ಬಹಳ ಅದ್ಭುತ. ಸಿಟಿ ಬಸ್ಸುಗಳಿಗಿಂತ ಸ್ವಲ್ಪ ತುಟ್ಟಿ
ಯಾದರೂ ಸಮಯ ಹರಣವಾಗದೆ ಎಲ್ಲಿಗೆ ಬೇಕಾದರೂ ಪ್ರಯಾಣಿಸಬಹುದು.
ಆ ವರ್ಷದ ಬೇಸಿಗೆ ಅತ್ಯಂತ ದುಸ್ಸಹನೀಯ. ಮಳೆಯು ಕಡಿಮೆ : ಏರುವ ಕಾವು
ಗಳಿಂದ ಜನಜರ್ಜರಿತರಾದರು. (ಇಂಥಾ ಕಡುಬೇಸಿಗೆಯಿಂದ ಸಂಭವಿಸಿದ ಸಾವು-
ನೋವು ಕಾಯಿಲೆ ಹಿಂದಿನ ವರ್ಷಕ್ಕಿಂತ ಜಾಸ್ತಿಯೆಂದು ಆಗಲೇ ಸರ್ಕಾರ ಸರ್ವೇಮಾಡಿ
ಪ್ರಕಟಿಸಿತ್ತು) ಅಂಥ ಒಂದು ದಿನ, ಸೆಕೆ ಮುಗಿಲಿಗೇರಿತ್ತು, ಟ್ರೇನ್ ಇಂಜಿನುಗಳೆಲ್ಲ
ಕೆಡುತ್ತಿದ್ದವು. ನಾನು ಕುಳಿತಿದ್ದ ಟ್ರೇನ್ ಎರಡು ಸ್ಟೇಷರ್ ಮಧ್ಯೆ ನಿಂತುಬಿಟ್ಟಿತು.
ಮೈಲುಗಟ್ಟಳೆ ಸುರಂಗದಲ್ಲಿ ಹಾದುಹೋಗುವ ಟ್ರೇನಿನ ಬಾಗಿಲನ್ನು ತೆರೆಯುವಂತಿಲ್ಲ.
ತೆರೆದರೆ ಇಳಿಯಲು ಜಾಗವಿಲ್ಲ. ಜನರು ಆಫೀಸಿಗೆ ಹೋಗುವ "ರಷ್ ಅವರ್"
ಆದ್ದರಿಂದ ಕಿಕ್ಕಿರಿದು ತುಂಬಿದ ಜನ. ಕೆಟ್ಟ ಸೆಕೆಯಿಂದ ಬೆವರಿನಲ್ಲಿ ಸ್ನಾನ ; ಗಾಳಿ
ಯಾಡದೆ ಅಪಾರ ವೇದನೆ. ಒಂದು ಗಂಟೆಯಾಯಿತು, ಕಷ್ಟಪಟ್ಟು ರೇಲ್ವೆ ಇಂಜಿನ್ನನ್ನು
ಮುಂದೆ ಒಯ್ಯಲು ಯತ್ನಿಸಿದರೂ ಸರಿಯುತ್ತಿಲ್ಲ; ಮಕ್ಕಳು ಚೀರಾಡಲಾರಂಭಿಸಿದರು.
ತಂಪು ವಾತಾವರಣಕ್ಕೆ ಹೊಂದಿಕೊಂಡ ಬಿಳಿಯ ಶರೀರಗಳು ಕಾವನ್ನು ತಡೆಯಲಾರವು.
ಮತ್ತು ಅಲ್ಲಿಯ ಸೆಕೆ ಅಸಹನೀಯ. ನಮ್ಮಲ್ಲಿ ಶಾಖ ಜಾಸ್ತಿಯಿದ್ದರೂ ತಂಪು ಮಿಶ್ರಿತ
ಗಾಳಿ ಆಗಾಗ ಬೀಸುವುದು. ಅದು ಒಣ ಹವೆ. ಒಬ್ಬ ಹೆಣ್ಣುಮಗಳು ಮೂರ್ಛೆ
ಹೊಂದಿದಳು. ರೇಲ್ವೆಯಲ್ಲಿ ಫ್ಯಾನ್‌ಗಳು ಇರುವುದಿಲ್ಲ, ಅಲ್ಲಿ ಅದರ ಅವಶ್ಯಕತೆಯೂ
ಇಲ್ಲವಷ್ಟೆ. ಪೇಪರ್‌ಗಳಿಂದ ಗಾಳಿಹಾಕಿ ಯಾರೋ ತಮ್ಮಲ್ಲಿದ್ದ ತಂಪುಪಾನೀಯ
ಕುಡಿಯಲು ಕೊಟ್ಟರು. ಸಂಕಟ ತಡೆಯಲಾರದೆ ಕಿಟಕಿ–ಬಾಗಿಲ ಗಾಜುಗಳನ್ನು ಕಾಲಿನ
ಬೂಟುಗಳಿಂದಲೇ ಒಡೆದು, ಸಣ್ಣ ಮಕ್ಕಳನ್ನು ಬಾಗಿಲ ಬಳಿ ನಿಲ್ಲಿಸಿದರು. ಎಲ್ಲರ
ಮುಖ ಬಿಳಿಚಿಕೊಂಡಿವೆ, ಮುಂದೆ ಏನಾಗುವುದೋ ಎಂದು ವಿಪರೀತ ಆತಂಕ. ರೇಲ್ವೆ
ವಿಭಾಗದವರೂ ನಿಸ್ಸಹಾಯಕರು. ಸುರಂಗವಾದ್ದರಿಂದ ಏನೂ ಮಾಡಲು ಬರುತ್ತಿಲ್ಲ
ಒಂದೂವರೆ ಗಂಟೆಯ ಸೆಣಸಾಟದ ಬಳಿಕ, ನಮ್ಮ ಗಾಡಿ ಮುಂದಿನ ಸ್ಟೇಷರ್ ಮುಟ್ಟಿತು
ಇಳಿದ ಜನ ಹರ್ಷೋದ್ಗಾರ ಮಾಡಿದ ಬಳಿಕ, ರೇಲ್ವೆಯವರನ್ನು ತರಾಟೆಗೆ ತೆಗೆದು
ಕೊಂಡರು. ಅಧಿಕಾರಿಗಳು ಕಷ್ಟಪಟ್ಟು ಜನರನ್ನು ಸಮಾಧಾನಮಾಡಿದರು. ಒಬ್ಬ
ಅಧಿಕಾರಿ ಜೋರಾಗಿ ಮಾತನಾಡಿದ್ದರಿಂದ. ಮಾತಿಗೆ ಮಾತು ಬೆಳೆದು ನಾಗರಿಕನೋರ್ವ
ಪೋಲೀಸರನ್ನು ಕರೆತಂದ. ಕಡೆಗೆ ಅಧಿಕಾರಿ ಕ್ಷಮೆ ಕೇಳುವ ತನಕ ಜನರು ಬಿಡಲಿಲ್ಲ.
ಅವನು ಕ್ಷಮೆ ಕೇಳಿದಾಗ ಪೋಲಿಸರು ಸಮಾಧಾನಮಾಡಿ, ದೂರನ್ನು ಕೊಡುವುದು
ಬೇಡ ಎಂದು ನಾಗರಿಕನನ್ನು ಸಂತೈಸಿಕಳಿಸಿದರು. ಇದನ್ನು ನೋಡಿದಾಗ ಪ್ರಜಾ
ಪ್ರಭುತ್ವವೆಂದರೆ "ಜನರಿಂದ, ಜನರಿಗಾಗಿ, ಜನರ ಆಳಿಕೆ" ಎಂಬ ಲಿಂಕನ್ನನ ವ್ಯಾಖ್ಯಾನ
ಸರಿಯೆನಿಸದಿರದು.



ಅನುಕೂಲತೆಗಳಂತೂ ಅಸಂಖ್ಯಾತ. ಲಂಡನ್ನಿನಲ್ಲಿ ಸ್ವಯಂಚಾಲಿತ ಯಂತ್ರ
ಗಳ ಸೌಲಭ್ಯ ಬಹಳ. ಪೆಪ್ಪರಮಿಂಟು, ಚಾಕೊಲೇಟ್ ಇತ್ಯಾದಿಗಳೆಲ್ಲ 10ಪೆನ್ನಿಗಳ
ನಾಣ್ಯ ಹಾಕಿದರೆ ತಟ್ಟನೆ ಸಿಗುವವು. ಪೋಸ್ಟ್ ಆಫೀಸಿನ ಸ್ಟಾಂಪುಗಳು ಸಹ ಅಷ್ಟೇ.
ಸಂಜೆ ಐದೂವರೆಗೆ ಪೋಸ್ಟ್ ಮುಚ್ಚಿದ ಬಳಿಕವೂ ಮತ್ತೊಮ್ಮೆ ಪೋಸ್ಟನ್ನು ಎತ್ತುವ
ಕಾರಣ, ಆಗ ಪೋಸ್ಟ್ ಮಾಡುವವರಿಗೆ ಈ ಸೌಲಭ್ಯವಿದೆ. ಅರ್ಧ ಪೆನ್ನಿಯಿಂದ
ಹಿಡಿದು ಆರರ ತನಕ ಸ್ಟಾಂಪ್‌ಗಳ ಸರ ಮಾಲೆ ಹತ್ತು ಪೆನ್ನಿ ನಾಣ್ಯ ಇಳಿಬಿಟ್ಟಾಗ ಸಿಗು
ವುದು. ಬೇಕಾದಷ್ಟು ಅಂಟಿಸಿ ಕಳಿಸಬಹುದು. ಪಬ್ಲಿಕ್ ಫೋನ್‌ಗಳ ಸೌಕರ್ಯ
ಅತ್ಯುತ್ತಮ. ಪ್ರತಿ ಬಸ್ ನಿಲ್ದಾಣ, ರೇಲ್ವೆ ಸ್ಟೇಷನ್, ಕೂಟಗಳು, ಮೆಯಿನ್
ರೋಡುಗಳ ಬದಿಯಲ್ಲಿ ಪಬ್ಲಿಕ್ ಫೋನ್‌ಗಳು. ಯಾವುದೇ ತೊಂದರೆಯಿಲ್ಲದೆ ಅನ್ಯ
ರೊಡನೆ ಮಾತಾಡಬಹುದು. ಬಾಡಿಗೆ ರೂಮುಗಳಲ್ಲಿಯೂ ಅಷ್ಟೇ; ಪ್ರತಿಯೋರ್ವನೂ
ಗ್ಯಾಸ್–ವಿದ್ಯುತ್ತಿಗಾಗಿ ಮೀಟರ್‌ನಲ್ಲಿ ಮೊದಲು ನಾಣ್ಯ ಹಾಕಿದರೇ ವಿದ್ಯುತ್ ಅಥವಾ
ಅಡಿಗೆಯ ಗ್ಯಾಸು. ಹೀಗೆ ಸೌಕರ್ಯಗಳು ಬಹುವಿಧ.

ಈ ಎಲ್ಲ ವಿವರಣೆಯನ್ನೋದಿದ ಬಳಿಕ ಅನೇಕ, ಅಷ್ಟೇಕೆ ಎಲ್ಲ ಭಾರತೀಯ
ರಿಗೆ ಬ್ರಿಟನ್ನು ಒಂದು ಸ್ವರ್ಗ, ನಂದನವನ ಎಂಬರಿವು ಬರಬಹುದು. ನಮ್ಮ ಪುರಾಣ
ಗಳಲ್ಲಿ ಓದಿ ಓದಿ ಸ್ವರ್ಗದ ಕಲ್ಪನೆಯನ್ನು ಮೂಡಿಸಿಕೊಂಡು ಅದಕ್ಕಾಗಿ ಹಾತೊರೆ
ಯುವ ಅನೇಕರಿಗೆ ಹಾಲಿನ ಸಂಮೃದ್ಧಿ, ಹಣ್ಣುಗಳ ವಿಪುಲತೆ, ಸೌಕರ್ಯಗಳ ಮೇಳ
ಎಲ್ಲ ಇರುವ ಕಾರಣ ಇದೇ ಸ್ವರ್ಗ ಎನಿಸಬಹುದು. ಹಾಗೆ ತಿಳಿದು 'ಹುಚ್ಚರಾಗಿ' ಆ
ಪಾಶ್ಚಾತ್ಯ ಸಂಸ್ಕೃತಿಯ ಸೆಳವಿನಲ್ಲಿ ಸಿಕ್ಕಿಬಿದ್ದವರ ಸಂಖ್ಯೆಯೇನೂ ಕಡಿಮೆಯಿಲ್ಲ.
ಅಲ್ಲಿ ಇಷ್ಟಿದ್ದರೂ ನಮ್ಮಲ್ಲಿ ಅಷ್ಟಿಲ್ಲವಾದರೂ ಭಾರತದ ಬದುಕು ಸರಳ, ಸುಂದರ.
ತಾಯ್ನಾಡಿನ ಅಭಿಮಾನದಿಂದ ಈ ಮಾತನ್ನು ನಾನಾಡುವುದು ಸಹಜವೆಂದು ಎಲ್ಲರೂ
ಭಾವಿಸಬಹುದು. ಹಾಗೆನಿಲ್ಲ; ಒಬ್ಬ ಸಮಾಜ ವಿಜ್ಞಾನಿಯಾಗಿ, ತತ್ವಜ್ಞಾನಿಯ
ದೃಷ್ಟಿಯಿಂದ ಮಾತನಾಡಿದಾಗ ಇದೊಂದು ಸತ್ಯ. ಕಾರಣವೆಂದರೆ ಸ್ವೇಚ್ಛೆಯ
ಜೀವನ, ಅತ್ಯಂತ ವಿಲಾಸಿ ಮನೋವೃತ್ತಿ ಆ ಸಮಾಜದ ಲೋಪಗಳು ಬಾಲಾಪರಾಧಿ
ಗಳ ಸಂಖ್ಯೆ ಬೆಳೆಯುತ್ತಿರುವುದು, ಸರ್ಕಾರಕ್ಕೆ ಮತ್ತು ವೈದ್ಯಕೀಯ ಕ್ಷೇತ್ರಕ್ಕೆ ತಲೆ
ನೋವಾಗಿದೆ. "ಗರ್ಭಿಣಿ ಸ್ತ್ರೀಯರೇ ಸಿಗರೇಟು ಸೇದದಿರಿ', 'ಮಾದಕ ಪೇಯಗಳನ್ನು
ಕುಡಿಯದಿರಿ' ಎಂದು ಅನೇಕ ಜಾಹಿರಾತು ಕೊಡುವರು, ಚರ್ಚಾಗೋಷ್ಠಿ ನಡೆಸುವರು,
ಸಲಹೆಗಳನ್ನು ರೇಡಿಯೋ ಟೆಲಿವಿಷನ್ ಮೂಲಕ ಕೊಡುವರು. ಆದರೂ ಸಮಸ್ಯೆ
ನಿಯಂತ್ರಣಕ್ಕೆ ಬರುತ್ತಿಲ್ಲ. ದಿನದಿನಕ್ಕೆ ಹಿಂಸಾಚಾರ ವೃದ್ಧಿಯಾಗುತ್ತಿದೆ. ಮೈಯೆಲ್ಲ
ಕಣ್ಣಾಗಿ ರಕ್ಷಣಾ ಸಿಬ್ಬಂದಿ ಕಾರ್ಯಮಾಡಿದರೂ ಕಳ್ಳತನ, ಸುಲಿಗೆ, ಅತ್ಯಾಚಾರ,
ಯುವತಿಯರ ಅಪಹರಣ ಮಕ್ಕಳ ಅಪಹರಣ ಸಾಗುತ್ತವೆ. [ಅಷ್ಟೋ ಬೇಗನೆ ಪತ್ತೆ
ಹಚ್ಚುತ್ತಾರೆ].

ಅಲ್ಲಿಯ ಕೌಟುಂಬಿಕ ಪದ್ಧತಿ ಆದರ್ಶವೆನಿಸದು. ಮುದುಕರಾದ ತಾಯಿ-ತಂದೆಯನ್ನು ನೋಡಿಕೊಳ್ಳುವುದಾಗಲೀ, ಪಾತಿವ್ರತ್ಯ, ನೀತಿವಂತಿಕೆ ಮುಂತಾದ ಆದರ್ಶಗಳಿಗೆ ಅಷ್ಟೊಂದು ಬೆಲೆಯಿಲ್ಲ. ಇದು ಎಲ್ಲರಿಗೂ ಅನ್ವಯಿಸುತ್ತದೆಂದಲ್ಲ. ಅಲ್ಲಿಯೂ ಆದರ್ಶ ದಂಪತಿಗಳು, ತಾಯಿ ತಂದೆಯರನ್ನು ಗೌರವಿಸುವ ಮಕ್ಕಳು ಇದ್ದಾರೆ. ಆದರೆ ಭಾರತೀಯ ಸಮಾಜ ಪದ್ಧತಿಗೆ ಹೋಲಿಸಿದಾಗ ಇಲ್ಲಿಯಷ್ಟು ದಾಂಪತ್ಯದ ಸೌಖ್ಯ, ಕೌಟುಂಬಿಕ ಸಾಮರಸ್ಯವಿರುವ ಸಂಖ್ಯೆ ಅಲ್ಲಿಲ್ಲ. ಕಾರಣವೆಂದರೆ ಕೆಲವು ಆದರ್ಶಗಳ ಅಚ್ಚಿನಲ್ಲಿ ಅಲ್ಲಿ ಮಕ್ಕಳು ಬೆಳೆಯುವ ಕಾರಣ ಅವರ ನಂಬುಗೆಗಳೇ ಬೇರೊಂದು ರೀತಿಯಲ್ಲಿರುತ್ತವೆ. ಓರ್ವ ವಿಧವೆ, ಕಳೆದ ವರ್ಷವಷ್ಟೇ ಗಂಡನನ್ನು ಕಳೆದುಕೊಂಡವಳು, ತುಂಬ ಸುಂದರವಾದ ದೊಡ್ಡ ಮನೆಯಲ್ಲಿ ವಾಸಿಸುವಳು. ಮನೆಯ ಕೆಲಭಾಗ ಬಾಡಿಗೆ ಕೊಟ್ಟಿದ್ದಳು, ಮತ್ತು ನೌಕರಿ ಮಾಡುವಳು. ಆದರೆ ಆಕೆಯ ಏಕೈಕ ಪುತ್ರ ಎಂ. ಎಸ್. ಪಿ. ಹೆಚ್‌ಡಿ., ಪದವೀಧರ, ಇನ್ನೂ ನೌಕರಿ ಸಿಕ್ಕಿಲ್ಲವಾದ ಕಾರಣ ಬೇರೊಂದು ಸಣ್ಣಗೂಡಿನಲ್ಲಿ (ಅಷ್ಟು ಸಣ್ಣ ರೂಮು) ವಾಸಿಸುತ್ತಿದ್ದು, ತನ್ನ ಅಡಿಗೆ ತಾನೇ ಮಾಡಿಕೊಳ್ಳುವನು. 'ಯೌವನಕ್ಕೆ ಬಂದ ಮಗ ತನ್ನ ಕಾಲ ಮೇಲೆ ತಾನು ನಿಲ್ಲಲಿ' ಎಂಬ ಧೋರಣೆ ಆಕೆಯದು. ಆದರೆ ಇರುವೊಬ್ಬ ಮಗನನ್ನು ಬಾಡಿಗೆ ಕೋಣೆಯಲ್ಲಿಟ್ಟು, ಅವನು ಸಾಮಾನ್ಯ ವಸ್ತ್ರ ತೊಟ್ಟು ಓಡಾಡುತ್ತಿದ್ದರೆ ತಾನು ಬೆಲೆಯುಳ್ಳ ವಸ್ತ್ರ ತೊಟ್ಟು ಕಾರಿನಲ್ಲಿ ಓಡಾಡುವ ಆ ತಾಯಿಗೆ ಹೃದಯವಾದರೂ ಇದೆಯೋ? ಕರುಳು ಚುರಕ್ಕೆನಿಸದೆ? ನನಗಂತೂ ಅಚ್ಚರಿ ಎನಿಸಿತು : (ಅವರೇನೂ ಜಗಳವಾಡಿಲ್ಲ, ವಿರಸ ಹೊಂದಿಲ್ಲ). ಇನ್ನೊಬ್ಬ ಗೃಹಿಣಿಯನ್ನು ಸಹಜವಾಗಿ ಮಾತನಾಡುವಾಗ ಕೇಳಿದೆ : ಏಕೋ ನಿಮ್ಮ ಕಾರು ಮೂರು ನಾಲ್ಕು ದಿನದಿಂದ ಕಾಣುತ್ತಿಲ್ಲ. "ಅದು ನನ್ನದಲ್ಲ, ನನ್ನ ಗಂಡನದು. ನನಗೆ ಕಾರಿಲ್ಲ; ಮೋಟಾರ್ ಬೈಕಿದೆ." ಕ್ಷಣ ಕಾಲ ದಂಗಾದೆ. "ನಿಮ್ಮ ಗಂಡನದು ನಿಮ್ಮದಲ್ಲವೇ?" "ಇಲ್ಲ, ನಾನು ಗಳಿಸಿದ್ದು ನನಗೆ, ಅವನದ್ದು ಅವನಿಗೆ. ಭಾರತದಲ್ಲಿ ಪತಿ-ಪತ್ನಿ ಮಾತನಾಡುವಾಗ "ನಮ್ಮ ಮನೆ, ನಮ್ಮ ಕಾರು, ನಮ್ಮ ಮಕ್ಕಳು" ಎನ್ನುವುದು ಬಹು ಸಹಜವಷ್ಟೇ. ಪತಿಯ ಸಂಪತ್ತಿಗೆ ಪತ್ನಿ ಒಡೆಯಳು. ಕೇವಲ ಕಾಯಿದೆ ದೃಷ್ಟಿಯಿಂದಲೇ ಅಲ್ಲ, ಹಾರ್ದಿಕ ದೃಷ್ಟಿಯಿಂದ. ಈ ಏಕೋಭಾವನೆ ಭಾರತೀಯ ಸಮಾಜದ ಗುಟ್ಟು, ಸುಖದ ತವರು. ಹಲವಾರು ವರ್ಷಗಳಿಂದ ಅಲ್ಲಿರುವ ಒಬ್ಬ ವಿದ್ಯಾವಂತ ಭಾರತಕ್ಕೆ ಬಂದು ಮದುವೆಯಾಗಿ ಹೋದ. ಉದ್ಯೋಗಾಕಾಂಕ್ಷಿಯಾಗಿ ಮೊದಲು ಹೋಗಿದ್ದವನು ಅಲ್ಲಿನ ಸಂಸ್ಕೃತಿಗೆ ಮಾರು ಹೋಗಿ, ಓರ್ವ ಯುವತಿಯನ್ನು ಮದುವೆಯಾಗಿ ಕೆಲ ಕಾಲದಲ್ಲೇ ಆಕೆಯ ಸ್ವತಂತ್ರ ಧೋರಣೆ ಸ್ವೇಚ್ಛಾ ಪ್ರವೃತ್ತಿಗೆ ಬೇಸತ್ತು ತ್ಯಜಿಸಿ, ಇಲ್ಲಿನ ವಧುವನ್ನು ಬಯಸಿದ. ನಾನು ಕೇಳಿದಾಗ ನುಡಿದ: "ನಮ್ಮ ಕನ್ಯೆಯರಲ್ಲಿರುವ ಶರಣಾಗತಿ, ಏಕೋಭಾವ ಪಾತಿವ್ರತ್ಯದ ಕಲ್ಪನೆ, ಸೇವಾ ಭಾವನೆಗಳು ಗಂಡ



ನಿಗೆ ನಿಜವಾಗಿ ನೆಮ್ಮದಿ ಕೊಡುವುವು. ಸಂಸಾರವನ್ನು ಆ ವರ್ತನೆ ನಂದನವಾಗಿಸುವುದು. ಈ ತಿಳಿವಳಿಕೆ ಬರಲು ನನಗೆ ಬಹುಕಾಲ ಹಿಡಿಯಿತು. ಅನಾಗರಿಕವೆಂದು ಅಂದುಕೊಂಡ ನಮ್ಮ ಸಂಸ್ಕೃತಿ ಈಗ ಅರ್ಥಪೂರಿತವೆನಿಸತೊಡಗಿದೆ".

ನಿಜ, ಬದುಕು ಭಾವನೆಗಳ ನಂದನವನ. ಕೇವಲ ಶರೀರದ ಸುಖ, ಹೊರಗಿನ ಬೆಡಗು, ಬಹುಕಾಲ ಮನುಷ್ಯನನ್ನು ಸುಖಿಯಾಗಿಡದು. ಅದನ್ನೇ ಬೆನ್ನುಹತ್ತಿ, ಬಸವಳಿದು ಆ ಬಳಿಕ ಭ್ರಮನಿರಶನವಾದ ಜನರ ಸಂಖ್ಯೆ ಬಹಳ. ಪರಸ್ಪರ ಸಹಕಾರ, ನಿಷ್ಠೆ, ತ್ಯಾಗ, ಅರ್ಪಣಾಭಾವವಿಲ್ಲದಿದ್ದರೆ ಬದುಕು ಬೆಂಗಾಡು. ಈ ದೃಷ್ಟಿಯಿಂದ ಭಾರತೀಯ ಕೌಟುಂಬಿಕ ಮೌಲ್ಯಗಳು ಮನನೀಯ. ಆದರೆ ದುರ್ದೈವದಿಂದ ಆಧುನಿಕ ತರುಣ ತರುಣಿಯರು-ಪಾಶ್ಚಿಮಾತ್ಯ ಸಂಸ್ಕೃತಿಯ ಸೆಳವಿಗೆ ಇಲ್ಲಿಯೂ ಸಿಕ್ಕುತ್ತಿರುವರು. ಯಾಂತ್ರಿಕ ಬದುಕು, ನೀರಸ ಕೌಟುಂಬಿಕ ಪದ್ಧತಿಯಿಂದ ಬೇಸತ್ತ ಅಲ್ಲಿಯವರು ಭಾರತೀಯ ಆದರ್ಶಗಳತ್ತ ಆಸೆಯಗಣ್ಣಿನಿಂದ ನೋಡುತ್ತಿದ್ದರೆ, ಇಲ್ಲಿಯವರು ಅಲ್ಲಿನ ಬೆಡಗಿನ ಬಂಧನಕ್ಕೆ ಮಾರು ಹೋಗುತ್ತಿದ್ದಾರೆ. ಈ ಏರಿದ ಅಲೆ ಖಂಡಿತಾ ಇಳಿದು, ಮತ್ತೊಮ್ಮೆ ಭಾರತೀಯ ಯುವಜನಾಂಗ ತಮ್ಮ ಇಡೀ ಸಂಸ್ಕೃತಿಯ ಸಿಂಹಾವಲೋಕನ, ಆತ್ಮ ನಿರೀಕ್ಷಣೆ ಮಾಡಿಕೊಳ್ಳುವ ಅವಕಾಶ ಬರುವುದೆಂದು, ಅಲ್ಲಿಯ ಸಮಾಜದ ಅವಲೋಕನ ಮಾಡಿದ ಬಳಿಕ ನನಗೆ ಅನ್ನಿಸುತ್ತಿದೆ. ಆದರೆ ಹಿಂದಕ್ಕೆ ಬರಲಾರದಷ್ಟು ಮುಂದೆ ಹೆಜ್ಜೆಯಿಟ್ಟು ಆ ಮೇಲೆ ಪರಿತಾಪ ಪಡುವಂತೆ (ಪಾಶ್ಚಿಮಾತ್ಯರಂತೆ) ಆಗಬಾರದೆಂಬುದೇ ದೇವರಲ್ಲಿ ನಮ್ಮ ಮೊರೆ.

ಅಲ್ಲಿಯ ಜನಾಂಗದ ಧಾರ್ಮಿಕ ವಿಚಾರದತ್ತ ಬಂದರೆ, ದೊಡ್ಡ ಪ್ರಮಾಣದಲ್ಲಿ ನಾಸ್ತಿಕತೆ ಬೆಳೆಯುತ್ತಿದೆ. ಐರ್ಲೆಂಡಿನಲ್ಲಿ ನಡೆಯುವ ಕ್ಯಾಥೋಲಿಕ್-ಪ್ರೊಟೆಸ್ಟೆಂಟ್ ಹೋರಾಟದಿಂದಂತೂ ಜನಬೇಸತ್ತು "ಧರ್ಮವನ್ನು ಬದಿಗೊತ್ತಿದರೆ ನಾವು ಸುಖವಾಗಿರುವೆವೇನೋ!" ಎನ್ನುವರು. ಆದರೆ ಹಿಂದೂ ಧಾರ್ಮಿಕ ವಿಚಾರಗಳ ಬಗ್ಗೆ ಕುತೂಹಲ-ಆಸಕ್ತಿ ತೀವ್ರವಾಗುತ್ತಿವೆ. 'ಯೋಗ'ದ ಬಗ್ಗೆ ಅಭಿಮಾನ ಬೆಳೆಯುತ್ತಿದೆ. ದಿನ ದಿನಕ್ಕೆ ಹಲವಾರು ಯೋಗ ಕೇಂದ್ರಗಳು ತೆರೆಯಲ್ಪಡುತ್ತಿವೆ. ಅಲ್ಲಿ ಯೋಗಾಸನ, ಪ್ರಾಣಾಯಾಮ, ಧ್ಯಾನಗಳು ಕಲಿಸಲ್ಪಟ್ಟು, ಯೋಗಾಭ್ಯಾಸದ ಜನಪ್ರಿಯತೆ ಹೆಚ್ಚುತ್ತಿದೆ. ಮೆಡಿಕಲ್ ರೀಸರ್ಚ್ ವಿಭಾಗ ಮತ್ತು ಮನೋವಿಜ್ಞಾನಿಗಳು ಯೋಗ ಸಾಧನವು ಶರೀರ, ಮನಸ್ಸುಗಳ ಮೇಲೆ ಮಾಡುವ ಪರಿಣಾಮದ ಬಗ್ಗೆ ಅಲ್ಲಲ್ಲೇ ವೈಜ್ಞಾನಿಕ ಅಭ್ಯಾಸಕ್ಕೆ ತೊಡಗಿದ್ದಾರೆ. ಹಿಂದೂ ಧರ್ಮದ ವ್ಯಕ್ತಿ ಸ್ವಾತಂತ್ರ್ಯವನ್ನು ಕೆಲವರು ತುಂಬ ಮೆಚ್ಚಿಕೊಳ್ಳುತ್ತಾರೆ. ಧಾರ್ಮಿಕ ತತ್ತ್ವಜ್ಞಾನಕ್ಕಿಂತ ಭಾರತದ ನೇರ ಆಕರ್ಷಣೆ 'ಯೋಗ'.

ಇದರಿಂದ ಅನ್ನಿಸುತ್ತದೆ ಒಂದು 'ಮದುವೆ' ನಡೆಯಬೇಕು, ಜಗತ್ತಿನ ಕಲ್ಯಾಣ

(ಪುಟ 64 ನೋಡಿರಿ)

# ಕಾರ್ಯಕ್ರಮ ವರದಿ

**೧. ಜಯನಗರ :** ಬೆಂಗಳೂರು ನಗರದ ಜಯನಗರದ ಬಡಾವಣೆಯಲ್ಲಿ ತಾ|| 9-3-1978 ರಿಂದ ಆರಂಭವಾದ ವಿಶ್ವಧರ್ಮ ಪ್ರವಚನ ಕಾರ್ಯಕ್ರಮ ಯಶಸ್ವಿಯಾಗಿ ಒಂದು ತಿಂಗಳವರೆಗೆ ನಡೆಯಿತು. ಪ್ರಾರಂಭೋತ್ಸವದಂದು ಉಪಸ್ಥಿತರಿದ್ದ ಪೂಜ್ಯ ಶ್ರೀ ಸದ್ಗುರು ಲಿಂಗಾನಂದ ಶ್ರೀಗಳು ಅಧ್ಯಕ್ಷತೆ ವಹಿಸಿದ್ದರು. ಶರಣ ಗೊ.ರು. ಚನ್ನಬಸಪ್ಪನವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಸನ್ಮಾನ್ಯ ಶರಣ ಕೆ. ಆರ್. ಲಿಂಗಪ್ಪನವರು ಎರಡನೆಯ ವಾರದಲ್ಲಿ ಆಗಮಿಸಿ ಜಾನಪದ ಸಾಹಿತ್ಯಾಮೃತವನ್ನು ಶ್ರೋತೃಗಳಿಗೆ ಉಣಬಡಿಸಿದರು. ದಿ. 6-4-1978 ರಂದು ನಡೆದ ಮುಕ್ತಾಯ ಸಮಾರಂಭದ ಅಧ್ಯಕ್ಷತೆಯನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಸನ್ಮಾನ್ಯ ಜಿ. ನಾರಾಯಣರವರು ವಹಿಸಿಕೊಂಡು ಪೂಜ್ಯ ಮಾತೆಯವರ ಅಮೋಘ ಸೇವೆಯನ್ನು ಸಾಹಿತ್ಯ ಪ್ರಸಾರವನ್ನು ಕೊಂಡಾಡಿದರು. "ಉಳಿದವರಿಗೂ ಪೂಜ್ಯ ಮಾತೆಯವರಿಗೂ ಇರುವ ವ್ಯತ್ಯಾಸವೆಂದರೆ, ಉಳಿದ ಗುರುಗಳ ದರ್ಶನಕ್ಕಾಗಿ ಭಕ್ತರೇ ಅಲ್ಲಿಗೆ ಹೋಗಬೇಕು ; ಆದರೆ ಮಾತೆಯವರು ತಾವಾಗಿ ಜನತೆಯ ಬಳಿ ಧಾವಿಸುತ್ತಾರೆ. ಬರೀ ದರ್ಶನ ನೀಡುವುದಷ್ಟೇ ಅಲ್ಲದೆ ಜ್ಞಾನಾಮೃತವನ್ನೂ ಧಾರೆ ಎರೆಯುತ್ತಾರೆ. ಯಾವ ಅದ್ದೂರಿ, ವೈಭವಗಳಿಲ್ಲದೆ ಸರಳವಾಗಿ ಧರ್ಮಗಂಗೆಯಂತೆ ನಿರಂತರವಾಗಿ ಹರಿಯುತ್ತಿದ್ದಾರೆ" ಎಂದು ಅಭಿಮಾನದಿಂದ ಮಾತನಾಡಿದರು.

**೨. ಚಾಮರಾಜನಗರ:** ಕ್ರಾಂತಿಯೋಗಿಗಳೂ, ಅವಿಶ್ರಾಂತ ಸ್ಫೂರ್ತಿಯೂ ಅದಮ್ಯ ಚೇತನವೂ ಆದ ಪೂಜ್ಯ ಶ್ರೀ ಸದ್ಗುರು ಲಿಂಗಾನಂದ ಸ್ವಾಮಿಗಳ ಪ್ರವಚನವು ದಿನಾಂಕ 2-4-1978 ರಂದು ಮೈಸೂರು ಜಿಲ್ಲೆಯ ಚಾಮರಾಜನಗರದಲ್ಲಿ ಆರಂಭವಾಗಿದೆ. ಕೊಳ್ಳೇಗಾಲದ ಸುಪ್ರಸಿದ್ಧ ವಕೀಲರಾದ ಅಪೂರ್ವವಾಗಿ ಪಿ. ಬಸವಣ್ಣ ಆರಂಭೋತ್ಸವದಂದು ಆಗಮಿಸಿ, ಉದ್ಘಾಟಿಸಿದರು. ಕಳೆದ ವರ್ಷ ಕೊಳ್ಳೇಗಾಲದಲ್ಲಿ ಪಿ. ಬಸವಣ್ಣನವರು ಏರ್ಪಡಿಸಿದ್ದ ಪೂಜ್ಯ ಸ್ವಾಮೀಜಿಯವರ ಪ್ರವಚನವನ್ನು ಅಲ್ಲಿಯ ನಾಗರಿಕರು. ಸದ್ಭಕ್ತರು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಭಾಗವಹಿಸಿ ಸದುಪಯೋಗ ಪಡಿಸಿಕೊಂಡುದನ್ನು ತಿಳಿಸಿ, ಈ ಮಹಾನ್ ಅವಕಾಶವನ್ನು ಕಳೆದುಕೊಳ್ಳಬಾರದೆಂದು ಚಾಮರಾಜನಗರದ ಜನತೆಯನ್ನು ಕೇಳಿಕೊಂಡರು. ದಿನದಿನಕ್ಕೂ ಅಧಿಕಧಿಕ ಸಂಖ್ಯೆಯಲ್ಲಿ ನೆರೆಯುತ್ತಿರುವ ಜನತೆಯು ಶ್ರೀ ಚಾಮರಾಜೇಶ್ವರ ದೇವಾಲಯದ ಮೈದಾನವನ್ನು ಕಿಕ್ಕಿರಿದು ತುಂಬುತ್ತಿದ್ದು ಕಾರ್ಯಕ್ರಮವು ಕಣ್ಣು, ಮನಗಳಿಗೆ ಹಬ್ಬವನ್ನುಂಟು ಮಾಡುತ್ತದೆ. ಈ ಸಮಾರಂಭವು ಪೂಜ್ಯ ಮಾತಾಜಿಯವರಿಂದ 24-4-78 ರಿಂದ ಮುಂದುವರಿಸಲಾಗಿದ್ದು 9-5-1978ರ ಬಸವಜಯಂತಿಯವರೆಗೆ ಅವ್ಯಾಹತವಾಗಿ ಸಾಗಲಿದೆ.



**೩. ಕೃಷ್ಣರಾಜಪುರ :** ಬೆಂಗಳೂರು ಜಿಲ್ಲೆಯ ಕೃಷ್ಣರಾಜಪುರ, ಅಥವಾ ದೂರವಾಣಿನಗರ (I.T.I.)ದಲ್ಲಿ ಪೂಜ್ಯ ಶ್ರೀ ಮಾತೆಯವರ ಕಾರ್ಯಕ್ರಮ 9 ದಿವಸಗಳ ಕಾಲ ನಡೆಯಿತು. ಉಗಾದಿ ಪ್ರತಿಪದೆಯ ಪ್ರಭುದೇವ ಜಯಂತಿಯಂದು ನಡೆದ ಪ್ರಾರಂಭೋತ್ಸವದ ಅಧ್ಯಕ್ಷತೆಯನ್ನು ಗಾನಕೋಕಿಲೆ ಶರಣೆ ಜಿ. ಚನ್ನಮ್ಮನವರು ವಹಿಸಿದ್ದರು. ನಿಜಲಿಂಗಪ್ಪ ಕಾಲೇಜಿನ ಪ್ರಾಧ್ಯಾಪಕರಾದ ಶರಣ ಸಿ. ಸೋಮಶೇಖರ್ ರವರು ಪೂಜ್ಯ ಮಾತೆಯವರ ಪರಿಚಯವನ್ನು ಮನೋಜ್ಞವಾಗಿ ಮಾಡಿಕೊಟ್ಟರು. ಕೃಷ್ಣರಾಜಪುರ ಪಂಚಾಯಿತಿ ಹಾಲ್ ಮುಂದೆ ನಡೆದ ಕಾರ್ಯಕ್ರಮ ದೂರವಾಣಿ ನಗರದ ಆಶ್ರಯದಲ್ಲಿ 9 ದಿವಸಗಳ ಕಾಲ ಜರುಗಿ, ದಿ. 16-4-1978 ರಂದು ಮಂಗಲಗೊಂಡಿತು.

## ಚಿಕ್ಕಮಗಳೂರಿನಲ್ಲಿ "ತರಂಗಿಣಿ" ಬಿಡುಗಡೆ

(ಸ್ಥಳೀಯ ದಿನಪತ್ರಿಕೆ ಜನಮಿತ್ರದಿಂದ)

ಹಲವಾರು ಧ್ಯೇಯೋದ್ದೇಶಗಳ ಬೃಹತ್ ಯೋಜನೆಗಳಿಂದ ಧರ್ಮ ಜಾಗೃತಿಗಾಗಿ ಶ್ರಮಿಸುತ್ತಿರುವ ಪೂಜ್ಯ ಜಗದ್ಗುರು ಮಾತೆ ಮಹಾದೇವಿಯವರು, ನಿನ್ನೆ ಇಲ್ಲಿನ ಎಂ.ಇ.ಎಸ್. ಆವರಣದಲ್ಲಿ ಪ್ರವಚನ ಮಾಡುತ್ತಾ, ವಿಶ್ವದ ಎಲ್ಲಾ ಧರ್ಮಾನುಯಾಯಿಗಳಿಂದ ನೆರವು ಪಡೆದು, ಭಾರತೀಯ ಸಂಸ್ಕೃತಿ, ಇತಿಹಾಸಗಳ ವಿಹಂಗಮ ನೋಟ ಒಟ್ಟಾಗಿ ನೀಡುವ ಹತ್ತುಲಕ್ಷ ರೂ.ಗಳ ಯೋಜನೆ ವ್ಯವಸ್ಥೆ ಮಾಡಿರುವುದಾಗಿ ಪ್ರಕಟಿಸಿದರು.

ತಮ್ಮ ಗ್ರಂಥ 'ತರಂಗಿಣಿ' ಬಗ್ಗೆ ಮಾತನಾಡುತ್ತಾ ಅಕ್ಕಮಹಾದೇವಿಯ ಜೀವನ ಪರಿಚಯಿಸುವ ಗ್ರಂಥಕ್ಕೆ ಆ ಮಹಾನ್ ವ್ಯಕ್ತಿಯನ್ನು ನದಿಯಂತಿರುವುದರಿಂದ 'ತರಂಗಿಣಿ' ಎಂದು ಹೆಸರಿಡಲಾಗಿದೆ ಎಂದರು. ನದಿಯ ಗುರಿ, ಸಾಗರ ಸೇರುವುದು. ಅದು ಯಾವ ಅಡೆ-ತಡೆ ಬಂದರೂ ನಿಲ್ಲದೆ, ತನ್ನ ಗುರಿಯನ್ನು ಸೇರುವುದು. ಮಾನವನೂ ನದಿಯಂತಾಗಬೇಕು. ಅವನ ಗುರಿ, ಭಗವಂತನಲ್ಲಿ ಐಕ್ಯವಾಗುವುದಾಗಬೇಕು. ಅದರ ಜೊತೆ, ಸಮಾಜಕ್ಕಾಗಿ, ಧರ್ಮಕ್ಕಾಗಿ, ಸಹಾಯಕಾರಕವಾಗುವಂತೆ ಜೀವನ ನಡೆಸಬೇಕು.

ಭಗವಂತನ ದುಂಬಿ, ಭಕ್ತರ ಹೃದಯ ಪುಷ್ಪಗಳಲ್ಲಿ ಹಾರಾಡುತ್ತಾನೆ. ಅವನ ಕಾರುಣ್ಯದಿಂದ ಹಗಲ ಶ್ರಮ ಕಳೆಯಲು ಬೆಳದಿಂಗಳ ಶಾಂತ ರಾತ್ರಿ ನಿರ್ಮಿತವಾಗಿದೆ. ಅಕ್ಕಮಹಾದೇವಿಯ ಬಾಳು ಭವ್ಯ-ದಿವ್ಯ-ರೋಮಾಂಚಕ. ಆಕೆಯ ಬಾಳು ತತ್ತ್ವ ಜ್ಞಾನ ಗಾಂಭೀರ್ಯದಿಂದ, ವೀರ ವೈರಾಗ್ಯದಿಂದ, ಸಾಹಿತ್ಯದ ಲಾಲಿತ್ಯದಿಂದ ತುಂಬಿ ತುಳುಕಾಡುತ್ತಿದೆ. 'ತರಂಗಿಣಿ' ಬಾಳಿನ ಒಂದು ಪ್ರತಿಬಿಂಬ ಎಂದರು.

ಜಾನಪದ ಸಾಹಿತಿ, ರಾಜ್ಯ ಪ್ರಶಸ್ತಿ ವಿಜೇತ ಕೆ. ಆರ್, ಲಿಂಗಪ್ಪನವರು 'ತರಂಗಿಣಿ' ಬಿಡುಗಡೆ ಮಾಡುತ್ತಾ "ಮೊಲಕ್ಕಿರುವ ಬೆಲೆಯೂ ಸತ್ತಮೇಲೆ ಮನುಷ್ಯನಿಗಿಲ್ಲ. ಮನುಷ್ಯ ಸನ್ಮಾರ್ಗದಲ್ಲಿ ಹೇಗೆ ನಡೆಯಬೇಕೆಂಬ ಮಾರ್ಗದರ್ಶನ 'ತರಂಗಿಣಿ'

ಯಿಂದ ದೊರೆಯುವುದು. ಎಲ್ಲರ ಮನೆಗಳಲ್ಲೂ ಈ ಗ್ರಂಥ ಇರಲೇಬೇಕಾದುದೆಂದರು.

ಸಾಹಿತಿ ಹಾಗೂ ಜನಪದ ಕಲಾವಿದರಾದ ಗೊ. ರು. ಚನ್ನಬಸಪ್ಪನವರು ವಿಜ್ಞಾನ ಮುಂದುವರೆಯುತ್ತಿರುವ ಈ ಕಾಲದಲ್ಲಿ ಜನಗಳಿಗೆ ನೆಮ್ಮದಿಸಿಗುವುದೇ ಕಠಿಣವಾಗಿ, ಯಾಂತ್ರಿಕ ಜೀವನ ಸಾಗಿಸುತ್ತಿರುವೆವು. ತರಂಗಿಣಿಯು ಜೀವನದ ಮೌಲ್ಯವನ್ನು ಆತ್ಮದ ಅರಿವನ್ನು ಜಾಗ್ರತಗೊಳಿಸುವುದು. ಈ ಗ್ರಂಥ ಅಕ್ಕಮಹಾದೇವಿಯ ಚರಿತ್ರೆಯಷ್ಟೇ ಅಲ್ಲ, ಮನುಕುಲದ ಚರಿತ್ರೆ ಎಂದರು. ಗ್ರಂಥ ಪರಿಚಯಕ್ಕೆ ಸಾಕಷ್ಟು ಕಾಲಾವಕಾಶವಿಲ್ಲವೆಂದ ಅವರು, ಮುಖಪುಟದ ಪರಿಚಯವನ್ನು ಒಂದು ಗಂಟೆಗೂ ಹೆಚ್ಚುಕಾಲ ಮಾಡಿಕೊಟ್ಟರು. ಗ್ರಂಥ ಮಳಿಗೆಯನ್ನು ಪಟ್ಟಣದ ಎನ್. ಎಸ್. ಮರಿಗಪ್ಪನವರು ನೆರವೇರಿಸಿದರು.

ತರಂಗಿಣಿ ಹಾಗೂ ಇತರ ಗ್ರಂಥಗಳ ಪ್ರಕಟಣೆಗೆ ಆರ್ಥಿಕ ನೆರವು ನೀಡಿದ್ದಕ್ಕಾಗಿ, ಎಂ.ಎಲ್. ಶ್ರೀನಿವಾಸ ಶ್ರೇಷ್ಠಿ, ಎ.ಎಂ. ಬಸವೇಗೌಡ, ಪಟೇಲ್ ಮರುಳ ಸಿದ್ಧೇಗೌಡ ಜಿ.ಬಿ. ಚಂದ್ರೇಗೌಡ, ಜಿ.ಬಿ. ಬೈರೇಗೌಡ, ಎನ್. ಎಸ್. ಮರಿಗಪ್ಪ ಹಾಗೂ ಶ್ರೀ ವಾಸವಿ ಮಹಿಳಾ ಮಂಡಳಿಯವರಿಗೆ ಮಾತಾಜಿಯವರು ಪುಷ್ಪಹಾರ ಪ್ರಶಸ್ತಿ ಪತ್ರಗಳನ್ನು ನೀಡಿ ಸತ್ಕರಿಸಿದರು.

**ನಂಜನಗೂಡು :** ರಾಷ್ಟ್ರಪತಿ ರಸ್ತೆಯಲ್ಲಿರುವ ಅರಮನೆ ಮುಂಭಾಗದ ಮೈದಾನದಲ್ಲಿ ಪೂಜ್ಯ ಶ್ರೀ ಸದ್ಗುರು ಲಿಂಗಾನಂದಸ್ವಾಮಿಗಳಿಂದ ದಿ. ೨೪-೪-೭೮ ರಿಂದ ಪ್ರವಚನ ಪ್ರಾರಂಭವಾಗಿದೆ.

**ಶಿವರಾಯ ಚಂದ್ರಕಂಠಿ.**

(೬೧ನೇ ಪುಟದಿಂದ)

ವಾಗಲಿಕ್ಕೆ ಎಂದು ! ಆ ನಾಡಿನಲ್ಲಿರುವ ರಾಷ್ಟ್ರೀಯ ಪ್ರಜ್ಞೆ, ಪ್ರಾಮಾಣಿಕತೆ, ಕರ್ತವ್ಯ ದಕ್ಷತೆ, ವೈಜ್ಞಾನಿಕ ದೃಷ್ಟಿಕೋನ ಮುಂತಾದ ಅಂಶಗಳನ್ನು ಮತ್ತು ಭಾರತೀಯ ಸಾಂಸ್ಕೃತಿಕ ಮೌಲ್ಯ, ಯೋಗ-ಧ್ಯಾನಗಳಂತಹ ಧಾರ್ಮಿಕ ಮೌಲ್ಯ, ಕೌಟುಂಬಿಕ ಪದ್ಧತಿಯ ಸಾಮಾಜಿಕ ಮೌಲ್ಯ-ಇವುಗಳ ನಡುವೆ ಮದುವೆಯಾದರೆ ಹೊಸ ಸಮಾಜವೊಂದನ್ನು ಪ್ರೀತಿ-ಪ್ರಾಮಾಣಿಕತೆ-ಅಧ್ಯಾತ್ಮಿಕತೆಯ ಮೇಲೆ ಕಟ್ಟಲು ಸಾಧ್ಯ, ಅಂಥ ಕನಸನ್ನು ಕಂಡು ಅಲ್ಡಸ್ ಹಕ್ಸ್ಲೀ 'Island' ಎಂಬ ಕಾದಂಬರಿಯನ್ನು ಬರೆದಿದ್ದಾನೆ. ಅದರಲ್ಲಿ ಇಂಥ ಸಾಮರಸ್ಯದ ಕಲ್ಪನೆ ಮೂಡಿಸಲೂ ಯತ್ನಿಸಿದ್ದಾನೆ. (ಪಶೇಪ)

---

ವಿಶ್ವಕಲ್ಯಾಣ ಮಿಷನ್ ಸಂಸ್ಥೆಯು ನಡೆಸುವ ಶಿಶುವಿಹಾರದಲ್ಲಿ ಕಲಿಸಲು ಇಂಗ್ಲಿಷ್ ಮಾಧ್ಯಮದಲ್ಲಿ ಎಸ್. ಎಸ್. ಎಲ್. ಸಿ. ವರೆಗೆ ಓದಿ, ನರ್ಸರಿ ಟ್ರೇನಿಂಗ್ ಪಡೆದು, ಆಂಗ್ಲ ಮಾಧ್ಯಮದಲ್ಲಿ ಕಲಿಸುವ ನರ್ಸರಿ ಶಿಕ್ಷಕಿಯರು ಬೇಕಾಗಿದ್ದಾರೆ.

---

Edited by H. H. Jagadguru Mate Mahadevi &
Printed at Super Printers Chickpet cross, Bangalore.

# ವಿಶ್ವಕಲ್ಯಾಣ ಮಿಷನ್ನಿನ

## ಸುವಿಧಾನ ಸುಗ್ರಂಥ ಮಾಲೆಯ ಲಭ್ಯವಿರುವ ಗ್ರಂಥಗಳು

| | ಗ್ರಂಥ | ಲೇಖಕರು | ರೂ. ಪೈ. |
|---|---|---|---|
| ೧. | ದೇವಪೂಜಾ ವಿಧಾನ | ಸ್ವಾಮಿ ಲಿಂಗಾನಂದ | ೨-೫೦ |
| ೨. | ವಿರಹ ತರಂಗ | ಮಾತೆ ಮಹಾದೇವಿ | ೩-೦೦ |
| ೩. | ಬಸವ ತತ್ತ್ವ ದರ್ಶನ | ,, | ೧೮-೦೦ |
| ೪. | ಚೆನ್ನಮ್ಮಲಾದ್ರಿಯ ಚಿತ್ಕಳೆ | ಸ್ವಾಮಿ ಲಿಂಗಾನಂದ | ೬-೦೦ |
| ೫. | ಸಾಮೂಹಿಕ ಪ್ರಾರ್ಥನೆ | ಸಂ : ಮಾತೆ ಮಹಾದೇವಿ | ೦-೫೦ |
| ೬. | ಹಿಂದು ಯಾರು ? | ,, | ೦-೫೦ |
| ೭. | ಬಸವ ವಚನ ಸುಧಾ | ಸಂ : ಮಾತೆ ಮಹಾದೇವಿ | ೨-೦೦ |
| ೮. | ವಚನಾಮೃತ | ಸ್ವಾಮಿ ಲಿಂಗಾನಂದ | ೨-೦೦ |
| ೯. | ಕಲ್ಯಾಣ ಕ್ರಾಂತಿ | ಮಾತೆ ಮಹಾದೇವಿ | ೩-೫೦ |
| ೧೦. | ದೇವರ ಮಕ್ಕಳು | ,, | ೨-೫೦ |
| ೧೧. | ಪತಿತೋದ್ಧಾರಕ | ,, | ೧-೫೦ |
| ೧೨. | ಲಿಂಗಾಯತ ಧರ್ಮ ಕೈಪಿಡಿ | ,, | ೨-೫೦ |
| ೧೩. | ಲಿಂಗಾಯತ ಧರ್ಮ ಸಂಸ್ಥಾಪಕರಾರು ? | ಬಿ. ಸಿ. ಜವಳಿ | ೪-೦೦ |
| ೧೪. | ಬಸವಣ್ಣನವರ ವಚನ ಪದ ಪ್ರಯೋಗ ಕೋಶ | ಎಸ್. ಆರ್. ಗುಂಜಾಳ | ೫೦-೦೦ |
| ೧೫. | ದೇವನೆಡೆಗೆ | ಮಾತೆ ಮಹಾದೇವಿ | ೧-೦೦ |
| ೧೬. | ಹೆಪ್ಪಿಟ್ಟ ಹಾಲು (ಸಾ. ಕಾದಂಬರಿ) | ,, | ೧೬-೦೦ |
| ೧೭. | Revolution in Kalyana | Mate Mahadevi | ೫-೦೦ |
| ೧೮. | A Guide to Lingayatism | ,, | ೬-೦೦ |
| ೧೯. | Emblem of God | Swami Lingananda | ೬-೦೦ |
| ೨೦. | ಅಧ್ಯಾತ್ಮ ಮತ್ತು ಮಹಿಳೆ | ಮಾತೆ ಮಹಾದೇವಿ | ೧-೦೦ |
| ೨೧. | ತರಂಗಿಣಿ (ಅಕ್ಕಮಹಾದೇವಿಯ ಕಾದಂಬರಿ) | ,, | ೩೩-೦೦ |
| ೨೨. | ವಿಶ್ವ ವಿಭೂತಿ ಬಸವಣ್ಣ | ,, | ೪-೦೦ |
| ೨೩. | Lingayatism | ,, | ೩-೦೦ |
| ೨೪. | ವಿಶ್ವಕಲ್ಯಾಣ ಗೀತೆ | ಸಂ : ,, | ೩-೦೦ |
| ೨೫. | ಮಾತೃ ಹರಕೆ | ,, | ೬-೦೦ |
| ೨೬. | Mataji A Profile | | ೦-೫೦ |
| ೨೭. | ವಿಶ್ವಕಲ್ಯಾಣ ಮಿಷನ್ ಪರಿಚಯ | ಶಿವರಾಯ ಚಂದ್ರಕಂಠಿ | ೦-೫೦ |
| ೨೮. | ಧರ್ಮಕ್ರಾಂತಿಯ ದಿವ್ಯ ಜ್ಯೋತಿ | ಗೊ. ರು. ಚ. | ೦-೫೦ |

ಬಸವಣ್ಣ, ಅಕ್ಕಮಹಾದೇವಿ, ಗುರೂಜಿ, ಮಾತಾಜಿಯವರ ಭಾವಚಿತ್ರಗಳು ಪ್ರತಿಯೊಂದಕ್ಕೆ ೧-೫೦

ಲಿಂಗಾಯತ ಯಾರು ? (ಚಾರ್ಟ್) (೦-೨೫) ವಿಶ್ವ ವಿಭೂತಿ ಬಸವಣ್ಣ (ಚಾಟ್) ೦-೫೦



ದಿ. 18-4-1978ರಂದು ಚಿಕ್ಕಮಗಳೂರಿನಲ್ಲಿ ನಡೆದ 'ತರಂಗಿಣಿ' ಕಾದಂಬರಿಯ ಬಿಡುಗಡೆ.
ಮುಖ್ಯ ಅತಿಥಿಗಳು : ಕೆ. ಆರ್. ಲಿಂಗಪ್ಪ, ಮುಖ್ಯ ಭಾಷಣಕಾರರು : ಗೊ. ರು. ಚ.

Correspond to :

Phone : 82335

BASAVA MANTAPA
No. 24, Chord Road, II Block, Rajajinagar
Bangalore-560010

Cover Printed by : Bhaskar Printers, B-53 Phone : 75467